# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 313
**ಮಾನ್ಯ ಸದಸ್ಯರ ಹೆಸರು** : ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ)
**ಉತ್ತರಿಸಬೇಕಾದ ದಿನಾಂಕ** : 16-02-2023
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಹಾಸನ ಜಿಲ್ಲೆ ಸಕಲೇಶಪುರ ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಪ್ರವಾಸೋದ್ಯಮ ಇಲಾಖೆಯ ವತಿಯಿಂದ ಮಂಜೂರಾದ ಅನುದಾನವೆಷ್ಟು;</td><td>ಹಾಸನ ಜಿಲ್ಲೆ ಸಕಲೇಶಪುರ ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಪ್ರವಾಸೋದ್ಯಮ ಇಲಾಖೆಯ ವತಿಯಿಂದ ಮಂಜೂರಾದ ಅನುದಾನದ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ.</td></tr>
<tr><td>ಆ)</td><td>ಈ ಕ್ಷೇತ್ರವು ಪಶ್ಚಿಮ ಘಟ್ಟಗಳ ಅಂಚಿನಲ್ಲಿದ್ದು, ಪ್ರವಾಸೋದ್ಯಮಕ್ಕೆ ಹೆಚ್ಚಿನ ಅವಕಾಶವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ</td></tr>
<tr><td>ಇ)</td><td>ಹಾಸನ ತಾಲ್ಲೂಕು ಗೊರೂರು ಹೇಮಾವತಿ ಜಲಾಶಯದ ಮುಂಭಾಗ ಬುದ್ಧ ಪಾರ್ಕ್ ನಿರ್ಮಿಸುವ ಯೋಜನೆಯು ಸರ್ಕಾರದ ಮುಂದಿದೆಯೇ;</td><td>ಇರುವುದಿಲ್ಲ.</td></tr>
<tr><td>ಈ)</td><td>ಈ ಕ್ಷೇತ್ರದಲ್ಲಿ ಈವರೆಗೆ ಗುರುತಿಸಿರುವ ಪ್ರವಾಸಿ ತಾಣಗಳಾವುವು?</td><td>ಹಾಸನ ಜಿಲ್ಲೆಯ ಸಕಲೇಶಪುರ ವಿಧಾನಸಭಾ ಕೇತ್ರಕ್ಕೆ ಪ್ರವಾಸೋದ್ಯಮ ಇಲಾಖೆಯಿಂದ ಗುರುತಿಸಿರುವ ಪ್ರವಾಸಿ ತಾಣಗಳ ವಿವರ ಈ ಕೆಳಕಂಡಂತಿದೆ.
<table>
<tr><th>ತಾಲ್ಲೂಕು</th><th>ಪ್ರವಾಸಿ ಸ್ಥಳಗಳು</th><th>ಸಂಖ್ಯೆ</th></tr>
<tr><td>ಸಕಲೇಶಪುರ</td><td>ಮರಗುಂದ, ಮುಂಜ್ರಾಬಾದ್ ಕೋಟೆ, ಮೂಕನಮನೆ ಜಲಪಾತ, ಅಬ್ಬಿ ಜಲಪಾತ, ಬಿಸ್ಲೆಘಾಟ್-ಬಿಸಿಲೆ, ಪಾಂಡವರ ಬೆಟ್ಟ, ಮೂರ್ಕಣ್ ಬೆಟ್ಟ, ಜೇನುಕಲ್ಲ ಬೆಟ್ಟ, ಗುಡ್ಡ ಬಸವಣ್ಣ, ಪಾಟ್ಲೆಬೆಟ್ಟ</td><td>10</td></tr>
<tr><td>ಆಲೂರು</td><td>ಪಾರ್ವತಮ್ಮ ಬೆಟ್ಟ, ಮಗನ ತಿಂದ ಮಹಾರಾಯಣ ಬೆಟ್ಟ (ಮಹಾರಾಜನ ದುರ್ಗ)</td><td>2</td></tr>
</table></td></tr>
</table>

TOR 20 TDV 2023

(ಆನಂದ್ ಸಿಂಗ್)
ಪ್ರವಾಸೋದ್ಯಮ,
ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

# ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 313ಕ್ಕೆ ಅನುಬಂಧ

(ರೂ.ಲಕ್ಷಗಳಲ್ಲಿ)

| ಕ್ರ ಸಂ | ಕಾಮಗಾರಿಯ ಹೆಸರು | ಮಂಜೂರಾದ ವರ್ಷ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಬಿಡುಗಡೆ ಮಾಡಿರುವ ಅನುದಾನ | | |
|---|---|---|---|---|---|---|---|
| | | | | | 2019-20 | 2020-21 | 2021-22 |
| | ಹಾಸನ ಜಿಲ್ಲೆ | | | | | | |
| | ಸಕಲೇಶಪುರ ತಾಲ್ಲೂಕು | | | | | | |
| 1 | ಸಕಲೇಶಪುರ ತಾಲ್ಲೂಕು ಹಾನಬಾಳು ಹೋಬಳಿ ಬಿಳಿಸಾರೆಯಿಂದ ಪ್ರೇಕ್ಷಣಿಯ ಸ್ಥಳವಾದ ಗುಡ್ಡಕ್ಕೆ ಹೋಗುವ ರಸ್ತೆ ಅಭಿವೃದ್ಧಿ. | 2019-20 | 75.00 | ಕೆಆರ್ ಐಡಿಎಲ್ | 25.00 | 40.00 | 10.00 |
| 2 | ಸಕಲೇಶಪುರ ತಾಲ್ಲೂಕು ಹೆತ್ತೂರು ಹೋಬಳಿ ಮೂಕನಮನೆ ಫಾಲ್ಸ್ ರಸ್ತೆ ಅಭಿವೃದ್ಧಿ. | 2019-20 | 25.00 | ಲೋಕೋಪಯೋಗಿ ಇಲಾಖೆ | 8.00 | 0.00 | 0.00 |
| 3 | ಸಕಲೇಶಪುರ ತಾಲ್ಲೂಕು ಹಾನಬಾಳು ದೇವಲಕೆರೆ ರಸ್ತೆ ಮಧ್ಯದಲ್ಲಿರುವ ಮರಗಡಿ ಫಾಲ್ಸ್ ಅಭಿವೃದ್ಧಿ. | 2019-20 | 30.00 | ಕೆಆರ್ ಐಡಿಎಲ್ | 25.00 | 0.00 | 5.00 |
| 4 | ಸಕಲೇಶಪುರ ತಾಲ್ಲೂಕಿನ ಮಂಜ್ರಾಬಾದ್ ಕೋಟೆಗೆ ಸಂಪರ್ಕ ರಸ್ತೆ ಅಭಿವೃದ್ಧಿಪಡಿಸುವುದು ಹಾಗೂ ವಾಹನ ನಿಲ್ದಾಣ ಕಲ್ಪಿಸುವುದು | 2019-20 | 200.00 | ಕೆಆರ್ ಐಡಿಎಲ್ | 0.00 | 0.00 | 66.00 |
| | **ಒಟ್ಟು ಮೊತ್ತ** | | **330.00** | | **58.00** | **40.00** | **81.00** |

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:** 315

**ಸದಸ್ಯರ ಹೆಸರು** : ಶ್ರೀ ಉಮನಾಥ ಎ ಕೋಟ್ಯಾನ್ (ಮೂಡಬಿದ್ರೆ)

**ಉತ್ತರಿಸುವ ದಿನಾಂಕ** : 16.02.2023

**ಉತ್ತರಿಸುವ ಸಚಿವರು** : ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯದ ಗಡಿ ಪ್ರದೇಶಗಳಾವುವು ಹಾಗೂ ಹೊರನಾಡು ಕನ್ನಡಿಗರಿಗಾಗಿ ಸರ್ಕಾರ ಜಾರಿಗೊಳಿಸಿರುವ ಪ್ರೋತ್ಸಾಹಕ ಯೋಜನೆಗಳಾವುವು; (ವಿವರ ನೀಡುವುದು) | ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿರುವ ಗಡಿ ಪ್ರದೇಶಗಳ ಜಿಲ್ಲೆಗಳು ಮತ್ತು ತಾಲ್ಲೂಕಿನ ಹೆಸರುಗಳ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ.<br>ಪ್ರೋತ್ಸಾಹಕ ಯೋಜನೆಗಳ ವಿವರ:<br>**ರಾಜ್ಯದಲ್ಲಿನ ಗಡಿನಾಡು ಮತ್ತು ಹೊರನಾಡು ಕನ್ನಡಿಗರಿಗೆ ಸರ್ಕಾರಿ ಮತ್ತು ಸಂಘ ಸಂಸ್ಥೆಗಳ ಮೂಲಕ ಕೈಗೊಂಡಿರುವ ಯೋಜನೆಗಳು**<br>ಶಾಲಾಕೊಠಡಿಗಳು, ಸಾಂಸ್ಕೃತಿಕ ಭವನ, ಸಮುದಾಯ ಭವನ, ಶಾಲಾ ಆವರಣ ಗೋಡೆ, ಗ್ರಂಥಾಲಯ, ಶುದ್ಧ ಕುಡಿಯುವ ನೀರಿನ ಘಟಕ, ಬಯಲು ರಂಗ ಮಂದಿರ, ಕ್ರೀಡಾಕೊಠಡಿ, ಆಟದ ಮೈದಾನ ಮತ್ತು ಶೌಚಾಲಯ, ಗಣಕಯಂತ್ರ ಕೊಠಡಿಗಳ ನಿರ್ಮಾಣ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ. |
| (ಆ) | ಹೊರನಾಡು ಕನ್ನಡಿಗರು ವಾಸಿಸುತ್ತಿರುವ ನಗರ-ಮಹಾನಗರ ಪ್ರದೇಶಗಳಲ್ಲಿ 50 ವರ್ಷಗಳಿಗಿಂತಲೂ ಹೆಚ್ಚಿನ ಅವಧಿಯಿಂದ ಕನ್ನಡ ನಾಡುನುಡಿಯ ಹಿರಿಮೆಯನ್ನು ಪೋಷಿಸಿಕೊಂಡು ಬಂದ ಸಂಘ ಸಂಸ್ಥೆಗಳಿಗೆ ಸಹಾಯಕವಾಗಿ ಸಮುದಾಯ ಸಾಂಸ್ಕೃತಿಕ ಭವನ ನಿರ್ಮಾಣ ಸೇರಿದಂತೆ ಇತರ ಅಭಿವೃದ್ಧಿ ಕಾರ್ಯಗಳಿಗೆ ಅನುದಾನವನ್ನು ಒದಗಿಸಿಕೊಡುವ ನಿಟ್ಟಿನಲ್ಲಿ ಸರ್ಕಾರದ ಕ್ರಮಗಳಾವುವು; | ಪ್ರಶ್ನೆ (ಅ) ನಲ್ಲಿ ನೀಡಿರುವ ಉತ್ತರದಂತೆ. |

| (ಇ) | ಈವರೆಗೆ ಎಷ್ಟು ಹೊರನಾಡ ಸಂಘ ಸಂಸ್ಥೆಗಳಿಗೆ ನೆರವು ನೀಡಿ ಪ್ರೋತ್ಸಾಹಿಸಲಾಗಿದೆ; | **ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರವು 2010-11 ರಿಂದ ಇಲ್ಲಿಯವರೆಗೆ ಹೊರನಾಡ ಸಂಘ ಸಂಸ್ಥೆಗಳಿಗೆ ನೆರವನ್ನು ನೀಡಿರುವ ವಿವರಗಳು ಈ ಕೆಳಕಂಡಂತಿದೆ.**<br>ಮಹಾರಾಷ್ಟ್ರ ರಾಜ್ಯ : 216 ಸಂಘ ಸಂಸ್ಥೆಗಳು.<br>ಕೇರಳ ರಾಜ್ಯ : 93 ಸಂಘ ಸಂಸ್ಥೆಗಳು.<br>ಆಂಧ್ರಪ್ರದೇಶ ಮತ್ತು ತೆಲಂಗಾಣ : 9 ಸಂಘ ಸಂಸ್ಥೆಗಳು.<br>ಗೋವಾ : 2 ಸಂಘ ಸಂಸ್ಥೆಗಳು.<br>ತಮಿಳುನಾಡು : 2 ಸಂಘ ಸಂಸ್ಥೆಗಳು. |
|---|---|---|
| (ಈ) | ಚೆನ್ನೈ ಮಹಾನಗರ ಪ್ರದೇಶದಲ್ಲಿರುವ ಕನ್ನಡ ಬಳಗ ಸೋಶಿಯೋ ಕಲ್ಚರಲ್ ಅಸೋಸಿಯೇಷನ್ (ನೊಂ) ಇವರಿಗೆ ನುಡಿ ಸಂಸ್ಕೃತಿಯ ಆಚರಣೆ ಮತ್ತು ಕನ್ನಡಿಗರ ಸೇವಾಕಾರ್ಯಗಳಿಗಾಗಿ 2022-23 ನೇ ಸಾಲಿನಿಂದ ನಿರಂತರವಾಗಿ ಕನಿಷ್ಠ ಐದು ಲಕ್ಷ ರೂ.ಗಳ ಅನುದಾನ ನೀಡುವ ಕುರಿತು ಸರ್ಕಾರವು ಅಗತ್ಯ ಕ್ರಮ ಕೈಗೊಳ್ಳುವುದೇ? | ಚೆನ್ನೈ ಮಹಾನಗರ ಪ್ರದೇಶದಲ್ಲಿರುವ ಕನ್ನಡ ಬಳಗ ಸೋಶಿಯೋ ಕಲ್ಚರಲ್ ಅಸೋಸಿಯೇಷನ್ (ನೊಂ) ಎಂಬ ಸಂಸ್ಥೆಯಿಂದ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. ಈ ಸಂಸ್ಥೆಯಿಂದ ಪ್ರಸ್ತಾವನೆ ಮತ್ತು ಸಂಬಂಧಪಟ್ಟ ದಾಖಲೆಗಳು ಸ್ವೀಕೃತವಾದಲ್ಲಿ ಅನುದಾನದ ಲಭ್ಯತೆಯನ್ನು ಅನುಸರಿಸಿ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ.ಕಸಂವಾ/13/ಕೆಓಎಲ್ ಆಕ/2023

(ವಿ.ಸುನಿಲ್ ಕುಮಾರ್)
ಇಂಧನ ಹಾಗು ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಅನುಬಂಧ

**ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ಗಡಿ ಜಿಲ್ಲೆಗಳು ಮತ್ತು ತಾಲ್ಲೂಕುಗಳ ಹಾಗೂ 6 ಹೊರ ರಾಜ್ಯಗಳ ಪಟ್ಟಿ**

| ಕ್ರ.ಸಂ | ಗಡಿ ಜಿಲ್ಲೆಯ ಹೆಸರು | ಗಡಿ ತಾಲ್ಲೂಕುಗಳ ಹೆಸರು | ಕ್ರ.ಸಂ. | ಗಡಿ ಜಿಲ್ಲೆಯ ಹೆಸರು | ಗಡಿ ತಾಲ್ಲೂಕುಗಳ ಹೆಸರು |
|---|---|---|---|---|---|
| 1 | ಬೆಂಗಳೂರು ನಗರ | 1)ಆನೇಕಲ್ | 11 | ಮೈಸೂರು | 29)ಹೆಗ್ಗಡದೇವನಕೋಟೆ<br>30)ಸರಗೂರು (ಹೊಸದು) |
| 2 | ಬೆಂಗಳೂರು ಗ್ರಾಮಾಂತರ | 2)ಹೊಸಕೋಟೆ | 12 | ವಿಜಯಪುರ | 31)ವಿಜಯಪುರ<br>32)ಇಂಡಿ<br>33)ತಿಕೋಟ (ಹೊಸದು)<br>34)ಚಡಚಣ (ಹೊಸದು) |
| 3 | ರಾಮನಗರ | 3)ಕನಕಪುರ | 13 | ಬಳ್ಳಾರಿ | 35)ಬಳ್ಳಾರಿ<br>36)ಸಂಡೂರು<br>37)ಸಿರಗುಪ್ಪ |
| 4 | ಚಿತ್ರದುರ್ಗ | 4)ಚಳ್ಳಕೆರೆ<br>5)ಹಿರಿಯೂರು<br>6)ಮೊಳಕಾಲ್ಮೂರು | 14 | ಕಲಬುರ್ಗಿ | 38)ಅಫಜಲಪುರ<br>39)ಆಳಂದ<br>40)ಚಿಂಚೋಳಿ<br>41)ಸೇಡಂ |
| 5 | ಚಿಕ್ಕಬಳ್ಳಾಪುರ | 7)ಬಾಗೇಪಲ್ಲಿ<br>8)ಚಿಂತಾಮಣಿ<br>9)ಗೌರಿಬಿದನೂರು<br>10)ಗುಡಿಬಂಡೆ | 15 | ಯಾದಗಿರಿ | 42)ಶಹಪುರ<br>43)ಯಾದಗಿರಿ<br>44)ವಡಗೇರಾ (ಹೊಸದು)<br>45)ಗುರುಮಿಟ್ಕಲ್ (ಹೊಸದು) |
| 6 | ಕೋಲಾರ | 11)ಮಾಲೂರು<br>12)ಮುಳಬಾಗಿಲು<br>13)ಶ್ರೀನಿವಾಸಪುರ<br>14)ಬಂಗಾರುಪೇಟೆ<br>15)ಕೆ.ಜಿ.ಎಫ್ (ಹೊಸದು) | 16 | ರಾಯಚೂರು | 46)ಮಾನ್ವಿ<br>47)ರಾಯಚೂರು |
| 7 | ತುಮಕೂರು | 16)ಮಧುಗಿರಿ<br>17)ಪಾವಗಡ<br>18)ಸಿರಾ | 17 | ಬೆಳಗಾವಿ | 48)ಬೆಳಗಾವಿ<br>49)ಅಥಣಿ<br>50)ಹುಕ್ಕೇರಿ<br>51)ಚಿಕ್ಕೋಡಿ<br>52)ಖಾನಾಪುರ<br>53)ನಿಪ್ಪಾಣಿ(ಹೊಸದು) |
| 8 | ದಕ್ಷಿಣ ಕನ್ನಡ | 19)ಬಂಟ್ವಾಳ<br>20)ಮಂಗಳೂರು<br>21)ಪುತ್ತೂರು<br>22)ಸುಳ್ಯ | 18 | ಉತ್ತರ ಕನ್ನಡ | 54)ಕಾರವಾರ<br>55)ಜೋಯಿಡಾ |
| 9 | ಕೊಡಗು | 23)ಮಡಿಕೇರಿ<br>24)ವಿರಾಜಪೇಟೆ | 19 | ಬೀದರ್ | 56)ಬಸವಕಲ್ಯಾಣ<br>57)ಔರಾದ್<br>58)ಭಾಲ್ಕಿ<br>59)ಬೀದರ್<br>60)ಹುಮ್ನಾಬಾದ್<br>61)ಚಿಟಗುಪ್ಪ (ಹೊಸದು)<br>62)ಹುಲಸೂರು (ಹೊಸದು)<br>63)ಕಮಲಾನಗರ (ಹೊಸದು) |

| ಕ್ರ.ಸಂ. | ಗಡಿ ಜಿಲ್ಲೆಯ ಹೆಸರು | ಗಡಿ ತಾಲ್ಲೂಕುಗಳ ಹೆಸರು | ಕ್ರ.ಸಂ. | ಗಡಿ ಜಿಲ್ಲೆಯ ಹೆಸರು | ಗಡಿ ತಾಲ್ಲೂಕುಗಳ ಹೆಸರು |
|---|---|---|---|---|---|
| 10 | ಚಾಮರಾಜನಗರ | 25)ಚಾಮರಾಜನಗರ<br>26)ಗುಂಡ್ಲುಪೇಟೆ<br>27)ಕೊಳ್ಳೇಗಾಲ<br>28)ಹನೂರು (ಹೊಸದು) | 20 | ಕೇರಳ ರಾಜ್ಯ | ಕಾಸರಗೋಡು ಜಿಲ್ಲೆ |
| | | | 21 | ಮಹಾರಾಷ್ಟ್ರ ರಾಜ್ಯ | ಸೊಲ್ಲಾಪುರ, ಸಾಂಗ್ಲಿ |
| | | | 22 | ಆಂಧ್ರ ಪ್ರದೇಶ ರಾಜ್ಯ | ಅನಂತಪುರ ಜಿಲ್ಲೆ, ಕರ್ನೂಲ್, |
| | | | 23 | ತೆಲಂಗಾಣ ರಾಜ್ಯ | ಮೆಹಬೂಬ್‌ನಗರ ಜಿಲ್ಲೆ |
| | | | 24 | ತಮಿಳುನಾಡು, | ತಾಳವಾಡಿ, ನೀಲಗಿರಿ, ಕೃಷ್ಣಗಿರಿ |
| | | | 25 | ಗೋವಾ | ಗೋವಾ-ಕರ್ನಾಟಕ ಗಡಿ ಭಾಗ |

9/2

ಕಾರ್ಯದರ್ಶಿ,
ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ.

## ಕರ್ನಾಟಕ ವಿಧಾನಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **316**

ಸದಸ್ಯರ ಹೆಸರು : ಶ್ರೀ. ಡಾ॥ ಭರತ್ ಶೆಟ್ಟಿ ವೈ (ಮಂಗಳೂರು ನಗರ ಉತ್ತರ)

ಉತ್ತರಿಸುವ ದಿನಾಂಕ : 16.02.2023

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಎಷ್ಟು ಜನ ಶಿಕ್ಷಕರ ಕೊರತೆಯಿದೆ; (ವಿಷಯವಾರು ಶಿಕ್ಷಕರ ವಿವರ ನೀಡುವುದು) | ಕೆಳಗೆ ನೀಡಿದೆ |

ಪ್ರಾಥಮಿಕ ವಿಭಾಗದಲ್ಲಿ ವಿಷಯವಾರು ಖಾಲಿ ಹುದ್ದೆ ಮಾಹಿತಿ

| ಹಿರಿಯ ಮುಖ್ಯ ಶಿಕ್ಷಕರು | ಮುಖ್ಯ ಶಿಕ್ಷಕರು | ದೈಹಿಕ ಶಿಕ್ಷಕರು | ವಿಶೇಷ ಶಿಕ್ಷಕರು | ಜಿಪಿಟಿ | ಪಿಎಸ್‌ಟಿ | ಒಟ್ಟು |
|---|---|---|---|---|---|---|
| 20 | 61 | 88 | 08 | 718 | 593 | 1488 |

ಪ್ರೌಢ ಶಾಲಾ ವಿಭಾಗದಲ್ಲಿ ವಿಷಯವಾರು ಖಾಲಿ ಹುದ್ದೆ ಮಾಹಿತಿ

| ಪಿಸಿಎಂ | ಸಿಬಿಝಡ್ | ಕಲಾ | ಆಂಗ್ಲ | ಹಿಂದಿ | ಭಾಷೆಗಳು | ದೈ.ಶಿ | ವಿ.ಶಿ | ಒಟ್ಟು |
|---|---|---|---|---|---|---|---|---|
| 23 | 21 | 32 | 55 | 69 | 62 | 45 | 0 | 307 |

ಸಂಖ್ಯೆ:ಇಪಿ 33 ಎಸ್‌ಎಲ್‌ಬಿ 2023

(ಬಿ.ಸಿ. ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:** 317

**ಸದಸ್ಯರ ಹೆಸರು** : ಡಾ. ಭರತ್ ಶೆಟ್ಟಿ ವೈ (ಮಂಗಳೂರು ನಗರ ಉತ್ತರ)

**ಉತ್ತರಿಸುವ ದಿನಾಂಕ** : 16.02.2023

**ಉತ್ತರಿಸುವ ಸಚಿವರು** : ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಗಳೂರು ಉತ್ತರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬೊಂದಿಲ್ ಗ್ರಾಮದಲ್ಲಿ ನಿರ್ಮಿಸುತ್ತಿರುವ ರಂಗಮಂದಿರ ಕಟ್ಟಡದ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ; (ಮಾಹಿತಿ ನೀಡುವುದು) | ಮಂಗಳೂರಿನಲ್ಲಿ ನಿರ್ಮಾಣಗೊಳ್ಳುತ್ತಿರುವ ರಂಗ ಮಂದಿರ ಕಾಮಗಾರಿಯ ಪರಿಷ್ಕೃತ ಅಂದಾಜು ಪಟ್ಟಿಯನ್ನು ಸಲ್ಲಿಸುವಂತೆ ದಿನಾಂಕ:09.06.2022, 04.07.2022 ಹಾಗೂ ದಿನಾಂಕ: 28.11.2022ರಂದು ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರಿಗೆ ಪತ್ರದ ಮುಖೇನ ಕೋರಲಾಗಿರುತ್ತದೆ. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರಿಂದ ಪರಿಷ್ಕೃತ ಅಂದಾಜು ಪಟ್ಟಿಯ ಪ್ರಸ್ತಾವನೆಯು ಬಂದ ನಂತರ ನಿಯಮಾನುಸಾರ ಪರಿಶೀಲಿಸಲಾಗುವುದು. |
| (ಆ) | ಪ್ರಸ್ತುತ ರಂಗಮಂದಿರ ಕಟ್ಟಡ ಕಾಮಗಾರಿಗೆ ನೀಡಿರುವ ಅನುದಾನವೆಷ್ಟು? (ಮಾಹಿತಿ ನೀಡುವುದು) | ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಜಿಲ್ಲಾ ರಂಗ ಮಂದಿರ ಕಾಮಗಾರಿಗೆ ರೂ. 8.5 ಕೋಟಿ ಅನುದಾನ ಲಭ್ಯವಿರುತ್ತದೆ. |

**ಸಂಖ್ಯೆ.ಕಸಂವಾ/11/ಕವಿಸ/2023**

**(ವಿ.ಸುನಿಲ್ ಕುಮಾರ್)**
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 318

ಸದಸ್ಯರ ಹೆಸರು : ಶ್ರೀ ಸಂಗಮೇಶ್ವರ್ ಬಿ.ಕೆ (ಭದ್ರಾವತಿ)

ಉತ್ತರಿಸುವ ದಿನಾಂಕ : 16.02.2023.

ಉತ್ತರಿಸುವ ಸಚಿವರು : ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ ಹಾಗೂ ಸಕಾಲ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಭದ್ರಾವತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರೌಢಶಾಲೆಗಳ ಜೊತೆಗೆ ಹೆಚ್ಚುವರಿಯಾಗಿ ಇನ್ನೂ ನಾಲ್ಕು ಪ್ರೌಢಶಾಲೆಗಳಿಗೆ ಮಂಜೂರಾತಿ ಕೋರಿ ಸಲ್ಲಿಸಲಾಗಿರುವ ಪ್ರಸ್ತಾವನೆಯು ಈಗ ಸರ್ಕಾರದ ಯಾವ ಹಂತದಲ್ಲಿದೆ; | ಶಿವಮೊಗ್ಗ ಜಿಲ್ಲೆ ಭದ್ರಾವತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ದೊಡ್ಡೇರಿ, ಭದ್ರಾವತಿ ತಾಲ್ಲೂಕು ಈ ಶಾಲೆಯನ್ನು ಪ್ರೌಢಶಾಲೆಯಾಗಿ ಉನ್ನತೀಕರಿಸಲು ಜಿಲ್ಲಾ ಕಛೇರಿಯಿಂದ 2023-24ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಗೆ ಅರ್ಹ ಒಂದು ಪ್ರಸ್ತಾವನೆಯನ್ನು ಸ್ವೀಕರಿಸಲಾಗಿದೆ. ಈ ಪ್ರಸ್ತಾವನೆಯನ್ನು ಕೇಂದ್ರ ಶಿಕ್ಷಣ ಮಂತ್ರಾಲಯ, ನವದೆಹಲಿಗೆ ಸಲ್ಲಿಸಲಾಗಿದ್ದು, ಪರಿಶೀಲನೆಯಲ್ಲಿದೆ. |
| ಆ) | ಈ ಕ್ಷೇತ್ರ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರೌಢಶಾಲೆಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಇಲ್ಲಿಯವರೆಗೆ ಮಂಜೂರಾತಿ ನೀಡದಿರಲು ಕಾರಣವೇನು? (ಮಾಹಿತಿ ನೀಡುವುದು) | ಭದ್ರಾವತಿ ವಿಧಾನಸಭಾ ಕ್ಷೇತ್ರದಲ್ಲಿ 2009-10ನೇ ಸಾಲಿನಿಂದ ಈ ಕೆಳಕಂಡಂತೆ ಸರ್ಕಾರಿ ಪ್ರಾಥಮಿಕ ಶಾಲೆಗಳನ್ನು ಉನ್ನತೀಕರಿಸಿ ಪ್ರೌಢಶಾಲೆಗಳಾಗಿ ಮಂಜೂರಾಗಿರುತ್ತವೆ. (see table below) ಕೇಂದ್ರ ಶಿಕ್ಷಣ ಮಂತ್ರಾಲಯ ಮಾನದಂಡಗಳಿಗೆ ಅನುಸಾರ ಅರ್ಹತೆ ಇಲ್ಲದಿರುವ ಕಡೆಗಳಲ್ಲಿ ಮಂಜೂರಾತಿ ಸಾಧ್ಯವಾಗಿರುವುದಿಲ್ಲ. |

| ಕ್ರ.ಸಂ. | ಶಾಲೆಗಳ ಹೆಸರು | ವರ್ಷ |
|---|---|---|
| 1 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸುಲೆಬ್ಬೈಲು | 2010-11 |
| 2 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಅರಲಿಹಳ್ಳಿ | 2014-15 |

ಸಂಖ್ಯೆ: ಇಪಿ 79 ಎಸ್‌ಇಎಸ್ 2023

(ಬಿ.ಸಿ. ನಾಗೇಶ್)

ಶಾಲಾ ಶಿಕ್ಷಣ ಮತ್ತು ಸಾಕ್ಷರತಾ

ಇಲಾಖೆ ಹಾಗೂ ಸಕಾಲ ಸಚಿವರು.

(11)

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ 15ನೇ ಅಧಿವೇಶನ)

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | **319** |
| **ಸದಸ್ಯರ ಹೆಸರು** | : | **ಶ್ರೀ ಸಂಗಮೇಶ್ವರ್ ಬಿ.ಕೆ (ಭದ್ರಾವತಿ)** |
| **ಉತ್ತರಿಸುವ ದಿನಾಂಕ** | : | **16-02-2023** |
| **ಉತ್ತರಿಸುವವರು** | : | **ಸನ್ಮಾನ್ಯ ಮುಖ್ಯಮಂತ್ರಿಗಳು** |

| ಪ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭದ್ರಾವತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಬಸವನಗುಡಿ ಗ್ರಾಮದಲ್ಲಿ ಟ್ರೀ-ಪಾರ್ಕ್ ನಿರ್ಮಾಣ ಮಾಡುವಂತೆ ಸಲ್ಲಿಸಲಾಗಿರುವ ಪ್ರಸ್ತಾವನೆಯು ಈಗ ಸರ್ಕಾರದ ಯಾವ ಹಂತದಲ್ಲಿದೆ. (ಮಾಹಿತಿ ನೀಡುವುದು) | ವೃಕ್ಷೋದ್ಯಾನದ ಮಾರ್ಗಸೂಚಿಯನ್ವಯ ವೃಕ್ಷೋದ್ಯಾನ ಯೋಜನೆಯಡಿ ಒಂದು ವಿಧಾನಸಭಾ ಮತಕ್ಷೇತ್ರಕ್ಕೆ ಒಂದರಂತೆ ವೃಕ್ಷೋದ್ಯಾನ ನಿರ್ಮಾಣದ ಉದ್ದೇಶವಿರುತ್ತದೆ.<br>ಅದರಂತೆ, ಭದ್ರಾವತಿ ವಿಧಾನ ಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ಹಾಲಿ ಬುಳ್ಳಾಪುರದಲ್ಲಿ ಒಂದು ಟ್ರೀ ಪಾರ್ಕ್ ನಿರ್ಮಿಸಿ ಅಭಿವೃದ್ಧಿಗೊಳಿಸಲಾಗಿರುತ್ತದೆ.<br>ಬಾಕಿ ಉಳಿದ ಮತಕ್ಷೇತ್ರಗಳಲ್ಲಿ ಒಂದರಂತೆ ವೃಕ್ಷೋದ್ಯಾನದ ನಿರ್ಮಾಣದ ಗುರಿಯನ್ನು ಸಾಧಿಸಬೇಕಾಗಿರುತ್ತದೆ.<br>ಆದಕಾರಣ, ಟ್ರೀ-ಪಾರ್ಕ್ ಬದಲಿಗೆ **ಪ್ರಸ್ತಾಪಿತ ಪ್ರದೇಶದಲ್ಲಿ ದೇವರಕಾಡು ನಿರ್ಮಾಣಕ್ಕಾಗಿ ಪ್ರಸ್ತಾವನೆ ಸ್ವೀಕೃತಗೊಂಡಿದ್ದು, ಸದರಿ ಪ್ರಸ್ತಾವನೆಯು ಪರಿಶೀಲನೆಯ ಹಂತದಲ್ಲಿರುತ್ತದೆ**. |
| ಆ) | ಈ ಕಾಮಗಾರಿಯು ವಿಳಂಬವಾಗುತ್ತಿರಲು ಕಾರಣವೇನು? (ಮಾಹಿತಿ ನೀಡುವುದು) | ಭದ್ರಾವತಿ ತಾಲ್ಲೂಕಿನ ಗ್ರಾಮಾಂತರ ಪ್ರದೇಶವಾದ ಬಸವನಗುಡಿ, ಕೆ.ಹೆಚ್. ನಗರ, ಅಂತರಗಂಗೆ, ದೇವರ ನರಸೀಪುರ ಗ್ರಾಮಗಳನ್ನು ಒಳಗೊಂಡಂತೆ ಕೊರಲಕೊಪ್ಪ ಗ್ರಾಮದ ಸರ್ವೆ ನಂ.1ರ ಮೀಸಲು ಪ್ರದೇಶದಲ್ಲಿ ದೇವರಕಾಡು ನಿರ್ಮಾಣಕ್ಕಾಗಿ ಪ್ರಸ್ತಾವನೆಯು ಸ್ವೀಕೃತಗೊಂಡಿದ್ದು, ಪ್ರಸ್ತಾಪಿತ ಪ್ರದೇಶದಲ್ಲಿ ಸುಮಾರು 18-20 ವರ್ಷಗಳ ಹಳೆಯ ಅಕೇಶಿಯಾ ಮರಗಳಿದ್ದು, ಸದರಿ ಅಕೇಶಿಯಾ ಮರಗಳನ್ನು ತೆರವುಗೊಳಿಸುವ ಕುರಿತು ಕ್ಷೇತ್ರಾಧಿಕಾರಿಗಳಿಗೆ ಸೂಚಿಸಲಾಗಿದ್ದು, ಮರಗಳನ್ನು ತೆರವುಗೊಳಿಸಿದ ನಂತರ ಮುಂದಿನ ಅಗತ್ಯಕ್ರಮ ಕೈಗೊಳ್ಳಲಾಗುವುದು. |

**ಸಂಖ್ಯೆ: ಅಪಜೀ 03 ಎಫ್‌ಟಿಎಸ್ 2023**

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 320

ಮಾನ್ಯ ಸದಸ್ಯರ ಹೆಸರು : ಶ್ರೀ ಸಂಗಮೇಶ್ವರ್ ಬಿ.ಕೆ.(ಭದ್ರಾವತಿ)

ಉತ್ತರಿಸುವ ದಿನಾಂಕ : 16/02/2023

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಜೀವಿಶಾಸ್ತ್ರ, ಹಾಗೂ ಪರಿಸರ ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭದ್ರಾವತಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ನಾಗತಿ ಬೆಳಗುಲು ಗ್ರಾಮದಲ್ಲಿರುವ ಸುಪ್ರಸಿದ್ಧವಾದ ಶ್ರೀ ನಂಜುಂಡೇಶ್ವರ ದೇವಾಲಯದ ಬಳಿ ಉದ್ಯಾನವನವನ್ನು ನಿರ್ಮಾಣ ಮಾಡಲು ಸಲ್ಲಿಸಿರುವ ಪ್ರಸ್ತಾವನೆಯು ಈಗ ಸರ್ಕಾರದ ಯಾವ ಹಂತದಲ್ಲಿದೆ; | ಭದ್ರಾವತಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ನಾಗತಿ ಬೆಳಗುಲು ಗ್ರಾಮದಲ್ಲಿರುವ ಸುಪ್ರಸಿದ್ಧವಾದ ಶ್ರೀ ನಂಜುಂಡೇಶ್ವರ ದೇವಾಲಯದ ಬಳಿ ಉದ್ಯಾನವನವನ್ನು ನಿರ್ಮಾಣ ಮಾಡಲು ಯಾವುದೇ ಪ್ರಸ್ತಾವನೆಯು ಸ್ವೀಕೃತವಾಗಿರುವುದಿಲ್ಲ. |
| ಆ) | ಈ ಕಾಮಗಾರಿಯು ವಿಳಂಬವಾಗುತ್ತಿರಲು ಕಾರಣವೇನು; | ಉದ್ಭವಿಸುವುದಿಲ್ಲ |
| ಇ) | ಕಾಮಗಾರಿಯನ್ನು ಯಾವಾಗ ಪ್ರಾರಂಭ ಮಾಡಲಾಗುವುದು? (ಮಾಹಿತಿ ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ: ಟಿಓಆರ್ 33 ಟಿಡಿವಿ 2023

(ಆನಂದ್ ಸಿಂಗ್)
ಪ್ರವಾಸೋದ್ಯಮ, ಜೀವಿಶಾಸ್ತ್ರ,
ಹಾಗೂ ಪರಿಸರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 322

ಮಾನ್ಯ ಸದಸ್ಯರ ಹೆಸರು : ಶ್ರೀ ಸಂಗಮೇಶ್ವರ್ ಬಿ.ಕೆ. (ಭದ್ರಾವತಿ)

ಉತ್ತರಿಸುವ ದಿನಾಂಕ : 16/02/2023

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭದ್ರಾವತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಭದ್ರಾನದಿಯ ತೀರದಲ್ಲಿರುವ ಶ್ರೀ ಸಂಗಮೇಶ್ವರ ದೇವಾಲಯವನ್ನು ಕೂಡಲ ಸಂಗಮ ದೇವಾಲಯದ ಮಾದರಿಯಲ್ಲಿ ಪ್ರವಾಸೋದ್ಯಮ ತಾಣವನ್ನಾಗಿ ಮಾಡಲು ಸಲ್ಲಿಸಿರುವ ಪ್ರಸ್ತಾವನೆಯು ಈಗ ಸರ್ಕಾರದ ಯಾವ ಹಂತದಲ್ಲಿದೆ? (ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಟಿಓಆರ್ 35 ಟಿಡಿಪಿ 2019, ದಿನಾಂಕ: 30-09-2019ರ ಕ್ರಮ ಸಂಖ್ಯೆ:15ರಲ್ಲಿ ಭದ್ರಾವತಿ ನಗರದ ಕೂಡಲಸಂಗಮ ಮಾದರಿಯಲ್ಲಿ ಸಂಗಮೇಶ್ವರ ದೇವಸ್ಥಾನ ಅಭಿವೃದ್ಧಿ ಕಾಮಗಾರಿಯನ್ನು ರೂ.200.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಅನುಮೋದನೆ ನೀಡಲಾಗಿದೆ.<br><br>ಆದರೆ, ಸದರಿ ಕಾಮಗಾರಿಯು ದೇವಾಲಯದ ಅಭಿವೃದ್ಧಿ ಕಾಮಗಾರಿಯಾಗಿದ್ದು, ಪ್ರವಾಸೋದ್ಯಮ ಇಲಾಖೆಯು ದಿನಾಂಕ: 04/07/2019ರಲ್ಲಿ ಹೊರಡಿಸಿರುವ ಸುತ್ತೋಲೆಯಲ್ಲಿ ತಿಳಿಸಿರುವಂತೆ ಪ್ರವಾಸಿ ಸೌಲಭ್ಯಗಳಾದ ಶುದ್ಧ ಕುಡಿಯುವ ನೀರಿನ ಸೌಲಭ್ಯ (ಆರ್.ಓ.ಪ್ಲಾಂಟ್), ಶೌಚಾಲಯ ಮತ್ತು ಸ್ನಾನಗೃಹ, ಪಾರ್ಕಿಂಗ್ ಸೌಲಭ್ಯ, ಪ್ರವಾಸಿ ಸೂಚನಾ ಫಲಕಗಳು, ಆಸನಗಳ ವ್ಯವಸ್ಥೆ, ಮೆಟ್ಟಿಲುಗಳು ಮತ್ತು ರೈಲಿಂಗ್ಸ್, ಪರಗೋಲ, ಪಾತ್‌ವೇ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲು ಮಾತ್ರ ಅವಕಾಶವಿರುತ್ತದೆ.<br><br>ಈ ಹಿನ್ನಲೆಯಲ್ಲಿ ಇಲಾಖೆ ಸುತ್ತೋಲೆಯನ್ವಯ ವಿವರವಾದ ಅಂದಾಜುಪಟ್ಟಿ ಸ್ವೀಕೃತವಾದಲ್ಲಿ, ಸದರಿ ಕಾಮಗಾರಿಯನ್ನು ಅನುಷ್ಠಾನಗೊಳಿಸುವ ಬಗ್ಗೆ ಇಲಾಖೆಗೆ ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಗೆ ಅನುಗುಣವಾಗಿ ಪರಿಶೀಲಿಸಲಾಗುವುದು. |

ಸಂಖ್ಯೆ: ಟಿಓಆರ್ 31 ಟಿಡಿವಿ 2023

(ಆನಂದ್ ಸಿಂಗ್)
ಪ್ರವಾಸೋದ್ಯಮ, ಜೀವಿಶಾಸ್ತ್ರ ಮತ್ತು
ಪರಿಸರ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 440
**ಮಾನ್ಯ ಸದಸ್ಯರ ಹೆಸರು** : ಶ್ರೀ ನಾಗೇಂದ್ರ ಎಲ್. (ಚಾಮರಾಜ)
**ಉತ್ತರಿಸಬೇಕಾದ ದಿನಾಂಕ** : 16-02-2023
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಚಾಮರಾಜ ವಿಧಾನಸಭಾ ಕ್ಷೇತ್ರಕ್ಕೆ ಪ್ರವಾಸೋದ್ಯಮ ಇಲಾಖೆಯಿಂದ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; (ವಿವರ ಒದಗಿಸುವುದು) | ಮೈಸೂರು ತಾಲ್ಲೂಕಿನ ಚಾಮರಾಜ ಕ್ಷೇತ್ರದಲ್ಲಿ ವಿನೂತನ ದಾರಿದೀಪಗಳನ್ನು ಅಳವಡಿಸುವ ಕಾಮಗಾರಿಯನ್ನು ರೂ.100.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ: ಟಿಒಆರ್/35/ಟಿಡಿಪಿ/2019(1), ದಿನಾಂಕ: 08-11-2019ರಲ್ಲಿ ಅನುಮೋದನೆ ನೀಡಲಾಗಿರುತ್ತದೆ. ಸದರಿ ಕಾಮಗಾರಿಗೆ ದಿನಾಂಕ: 07-12-2019ರಂದು ಮೊದಲ ಕಂತಾಗಿ ರೂ.33.00 ಲಕ್ಷಗಳು ಹಾಗೂ ದಿನಾಂಕ: 19-03-2020 ರಂದು ಎರಡನೇ ಕಂತಾಗಿ ರೂ.40.00 ಲಕ್ಷಗಳು ಹಾಗೂ ದಿನಾಂಕ: 28-02-2022ರಂದು ಮೂರನೇ ಹಾಗೂ ಅಂತಿಮ ಕಂತಾಗಿ ರೂ.27.00 ಲಕ್ಷಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಐ.ಡಿ.ಎಲ್., ಬೆಂಗಳೂರು ರವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಕಾಮಗಾರಿ ಪೂರ್ಣಗೊಂಡಿದೆ. |
| ಆ) | ಬಿಡುಗಡೆಯಾದ ಅನುದಾನದಲ್ಲಿ ಯಾವ ಯಾವ ಕಾಮಗಾರಿಗಳು ಪೂರ್ಣಗೊಂಡಿವೆ; ಯಾವುವು ಪ್ರಗತಿಯಲ್ಲಿವೆ; (ವಿವರ ಒದಗಿಸುವುದು) | |
| ಇ) | ಪ್ರಸ್ತುತ ಸಾಲಿನಲ್ಲಿ ಯಾವ ಯಾವ ಯೋಜನೆಗಳಿಗೆ ಅನುದಾನ ಒದಗಿಸಲಾಗಿದೆ; (ವಿವರ ಒದಗಿಸುವುದು) | ಪ್ರಸಕ್ತ ಸಾಲಿನಲ್ಲಿ ಚಾಮರಾಜ ವಿಧಾನಸಭಾ ಕ್ಷೇತ್ರಕ್ಕೆ ಅನುದಾನ ಮಂಜೂರು ಮಾಡಲಾಗಿರುವುದಿಲ್ಲ.<br><br>2022-23ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 5452-01-800-0-14-132 ಬಂಡವಾಳ ವೆಚ್ಚಗಳಡಿ ಒದಗಿಸಲಾದ ಅನುದಾನ ರೂ.20.00ಕೋಟಿ ಮತ್ತು ಸದರಿ ಲೆಕ್ಕಶೀರ್ಷಿಕೆಯಡಿ ಒದಗಿಸಲಾದ ಹೆಚ್ಚುವರಿ ಅನುದಾನ ರೂ.20.00ಕೋಟಿ, ಒಟ್ಟಾರೆ ರೂ.40.00ಕೋಟಿ ಅನುದಾನವನ್ನು 955 ಮುಂದುವರೆದ ಕಾಮಗಾರಿಗಳಿಗೆ ಪ್ರಗತಿಗನುಗುಣವಾಗಿ ಬಿಡುಗಡೆ ಮಾಡಲಾಗಿರುತ್ತದೆ. ಅನುದಾನದ ಕೊರತೆಯಿಂದಾಗಿ ಚಾಮರಾಜ ವಿಧಾನಸಭಾ ಕ್ಷೇತ್ರಕ್ಕೆ ನೂತನ ಕಾಮಗಾರಿಗಳನ್ನು ಕೈಗೆತ್ತಿಕೊಂಡಿರುವುದಿಲ್ಲ. |
| ಈ) | ಅನುದಾನ ಒದಗಿಸದಿದ್ದಲ್ಲಿ, ಕಾರಣವೇನು? | |

**TOR 21 TDV 2023**

**(ಆನಂದ್ ಸಿಂಗ್)**
ಪ್ರವಾಸೋದ್ಯಮ,
ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 442

ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ.ಬಿ.ಎಂ (ಬೈಂದೂರು)

ಉತ್ತರಿಸಬೇಕಾದ ದಿನಾಂಕ : 16-02-2023

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ "ಬೆಳಕು ಯೋಜನೆಯಡಿ" ಸಲ್ಲಿಕೆಯಾದ ಅರ್ಜಿಗಳ ಸಂಖ್ಯೆ ಎಷ್ಟು; (ಗ್ರಾಮವಾರು ಸಂಪೂರ್ಣ ಮಾಹಿತಿ ಒದಗಿಸುವುದು) | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಬೈಂದೂರು ವಿಧಾನಸಭಾ ಕ್ಷೇತ್ರವ್ಯಾಪ್ತಿಯಲ್ಲಿ "ಬೆಳಕು ಯೋಜನೆಯಡಿ" ವಿದ್ಯುತ್ ಸಂಪರ್ಕ ಕಲ್ಪಿಸಲು ಕೋರಿ ಒಟ್ಟು 3093 ಅರ್ಜಿಗಳು ಸ್ವೀಕೃತವಾಗಿದ್ದು, ಈ ಪೈಕಿ ವಿದ್ಯುತ್ ಸಂಪರ್ಕ ಕಲ್ಪಿಸಲಾದ ಮನೆಗಳ ಸಂಖ್ಯೆ ಮತ್ತು ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುವ ಮನೆಗಳ ಸಂಖ್ಯೆಗಳ ಗ್ರಾಮವಾರು ವಿವರಗಳನ್ನು **ಅನುಬಂಧದಲ್ಲಿ** ಒದಗಿಸಿದೆ. |
| ಆ) | ಈ ಕ್ಷೇತ್ರ ವ್ಯಾಪ್ತಿಯಲ್ಲಿ ಸಲ್ಲಿಕೆಯಾದ ಅರ್ಜಿಗಳಲ್ಲಿ ವಿದ್ಯುತ್ ಸಂಪರ್ಕ ಪಡೆದ ಫಲಾನುಭವಿಗಳೆಷ್ಟು; (ಗ್ರಾಮವಾರು ಫಲಾನುಭವಿಗಳ ಸಂಪೂರ್ಣ ಮಾಹಿತಿ ಒದಗಿಸುವುದು) | |
| ಇ) | ಆ ಪೈಕಿ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು; (ಗ್ರಾಮವಾರು ಫಲಾನುಭವಿಗಳ ಸಂಪೂರ್ಣ ಮಾಹಿತಿ ಒದಗಿಸುವುದು) | |
| ಈ) | ಬಾಕಿ ಇರುವ ಫಲಾನುಭವಿಗಳಿಗೆ ಯಾವ ಕಾಲಮಿತಿಯಲ್ಲಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು? | ಕರ್ನಾಟಕ ಸರ್ಕಾರದ "ಬೆಳಕು ಯೋಜನೆಯಡಿ" ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮನೆಗಳ ವಿದ್ಯುತ್ ಸಂಪರ್ಕಕ್ಕಾಗಿ ಒಟ್ಟು 3,093 ಅರ್ಜಿಗಳು ಸ್ವೀಕೃತವಾಗಿದ್ದು, ಅವುಗಳ ಪೈಕಿ 2,423 ಮನೆಗಳಿಗೆ ಈಗಾಗಲೇ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗಿರುತ್ತದೆ. ಬಾಕಿ ಉಳಿದ 670 ಅರ್ಜಿಗಳಲ್ಲಿ ವಾಸ-ಯೋಗ್ಯ ಮನೆಗಳ ನಿಯಮಾನುಸಾರ ಪರಿಶೀಲನೆಯೊಂದಿಗೆ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯು ವಿದ್ಯುದೀಕರಣ ಕಾಮಗಾರಿಯನ್ನು ಆದ್ಯತೆಯ ಮೇರೆಗೆ ಕೈಗೊಳ್ಳಲಾಗುತ್ತದೆ. |

ಸಂಖ್ಯೆ:ಎನರ್ಜಿ 23 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 442ಕ್ಕೆ ಅನುಬಂಧ:-

ಬೈಂದೂರು ವಿಧಾನಸಭಾ ಕ್ಷೇತ್ರವ್ಯಾಪ್ತಿಯಲ್ಲಿ "ಬೆಳಕು ಯೋಜನೆಯಡಿ" ವಿದ್ಯುತ್ ಸಂಪರ್ಕಕ್ಕಾಗಿ ಸಲ್ಲಿಕೆಯಾದ ಅರ್ಜಿ, ವಿದ್ಯುತ್ ಸಂಪರ್ಕ ಕಲ್ಪಿಸಲಾದ ಅರ್ಜಿ ಹಾಗೂ ಬಾಕಿ ಇರುವ ಅರ್ಜಿಗಳ ಗ್ರಾಮವಾರು ವಿವರಗಳು:-

| ಕ್ರ ಸಂ | ತಾಲೂಕು | ಉಪವಿಭಾಗ | ಶಾಖೆ | ಗ್ರಾಮದ ಹೆಸರು | ಸಿಸಿ ಸಂಖ್ಯೆ | ವಿದ್ಯುತ್ ಸಂಪರ್ಕ ಕಲ್ಪಿಸಲು ಗುರುತಿಸಲಾದ ಮನೆಗಳ ಸಂಖ್ಯೆ | ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುವ ಮನೆಗಳ ಸಂಖ್ಯೆ | ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುವ ಮನೆಗಳ ಸಂಖ್ಯೆ |
|---|---|---|---|---|---|---|---|---|
| 1 | ಬೈಂದೂರು | ತಲ್ಲೂರು | ನಾಡಾ | ಆಲೂರು | 608706 | 48 | 48 | 0 |
| 2 | ಬೈಂದೂರು | ತಲ್ಲೂರು | ನಾಡಾ | ಬಡಾಕೆರೆ | 608671 | 23 | 22 | 1 |
| 3 | ಬೈಂದೂರು | ತಲ್ಲೂರು | ವಂಡ್ಸೆ | ಬೆಳ್ಳಾಲ | 608711 | 39 | 31 | 8 |
| 4 | ಬೈಂದೂರು | ತಲ್ಲೂರು | ವಂಡ್ಸೆ | ಚಿತ್ತೂರು | 608708 | 85 | 52 | 33 |
| 5 | ಬೈಂದೂರು | ತಲ್ಲೂರು | ತಲ್ಲೂರು | ದೇವಲ್ಕುಂದ | 608701 | 17 | 17 | 0 |
| 6 | ಬೈಂದೂರು | ತಲ್ಲೂರು | ಗಂಗೊಳ್ಳಿ | ಗಂಗೊಳ್ಳಿ | 608689 | 19 | 19 | 0 |
| 7 | ಬೈಂದೂರು | ತಲ್ಲೂರು | ಗಂಗೊಳ್ಳಿ | ಗುಜ್ಜಾಡಿ | 608688 | 54 | 53 | 1 |
| 8 | ಬೈಂದೂರು | ತಲ್ಲೂರು | ತಲ್ಲೂರು | ಗುಲ್ವಾಡಿ | 608703 | 30 | 28 | 2 |
| 9 | ಬೈಂದೂರು | ತಲ್ಲೂರು | ನಾಡಾ | ಹಡವು | 608673 | 2 | 2 | 0 |
| 10 | ಬೈಂದೂರು | ತಲ್ಲೂರು | ನಾಡಾ | ಹಕ್ಲಾಡಿ | 608696 | 37 | 22 | 15 |
| 11 | ಬೈಂದೂರು | ತಲ್ಲೂರು | ನಾಡಾ | ಹರ್ಕೂರು | 608698 | 39 | 39 | 0 |
| 12 | ಬೈಂದೂರು | ತಲ್ಲೂರು | ತಲ್ಲೂರು | ಹಟ್ಟಿಯಂಗಡಿ | 608692 | 22 | 22 | 0 |
| 13 | ಬೈಂದೂರು | ತಲ್ಲೂರು | ತಲ್ಲೂರು | ಹೆಮ್ಮಾಡಿ | 608695 | 13 | 11 | 2 |
| 14 | ಬೈಂದೂರು | ತಲ್ಲೂರು | ಗಂಗೊಳ್ಳಿ | ಹೊಸಾಡು | 608687 | 26 | 24 | 2 |
| 15 | ಬೈಂದೂರು | ತಲ್ಲೂರು | ತಲ್ಲೂರು | ಕನ್ಯಾನ | 608693 | 11 | 11 | 0 |
| 16 | ಬೈಂದೂರು | ತಲ್ಲೂರು | ವಂಡ್ಸೆ | ಕರ್ಕುಂಜೆ | 608704 | 76 | 50 | 26 |
| 17 | ಬೈಂದೂರು | ತಲ್ಲೂರು | ತಲ್ಲೂರು | ಕಟ್ಟ ಬೇಲ್ತೂರು | 608694 | 27 | 26 | 1 |
| 18 | ಬೈಂದೂರು | ತಲ್ಲೂರು | ತಲ್ಲೂರು | ಕೆಂಚನೂರು | 608702 | 6 | 6 | 0 |
| 19 | ಬೈಂದೂರು | ತಲ್ಲೂರು | ವಂಡ್ಸೆ | ಕೆರಾಡಿ | 608710 | 43 | 27 | 16 |
| 20 | ಬೈಂದೂರು | ತಲ್ಲೂರು | ವಂಡ್ಸೆ | ಕೊಡ್ಲಾಡಿ | 608712 | 55 | 41 | 14 |
| 21 | ಬೈಂದೂರು | ತಲ್ಲೂರು | ನಾಡಾ | ಕುಂದಬಾರಂದಾಡಿ | 608699 | 19 | 16 | 3 |
| 22 | ಬೈಂದೂರು | ತಲ್ಲೂರು | ನಾಡಾ | ನಾಡ | 608674 | 60 | 57 | 3 |
| 23 | ಬೈಂದೂರು | ತಲ್ಲೂರು | ನಾಡಾ | ನೂಜಾಡಿ | 608700 | 34 | 19 | 15 |
| 24 | ಬೈಂದೂರು | ತಲ್ಲೂರು | ನಾಡಾ | ಸೇನಾಪುರ | 608697 | 33 | 31 | 2 |
| 25 | ಬೈಂದೂರು | ತಲ್ಲೂರು | ತಲ್ಲೂರು | ತಲ್ಲೂರು | 608691 | 20 | 18 | 2 |
| 26 | ಬೈಂದೂರು | ತಲ್ಲೂರು | ಗಂಗೊಳ್ಳಿ | ತ್ರಾಸಿ | 608686 | 16 | 16 | 0 |

| 27 | ಬೈಂದೂರು | ತಲ್ಲೂರು | ತಲ್ಲೂರು | ಉಪ್ಪಿನಕುದ್ರು | 608690 | 2 | 2 | 0 |
|---|---|---|---|---|---|---|---|---|
| 28 | ಬೈಂದೂರು | ತಲ್ಲೂರು | ವಂಡ್ಸೆ | ವಂಡ್ಸೆ | 608708 | 52 | 36 | 16 |
| 29 | ಕುಂದಾಪುರ | ಶಂಕರನಾರಾಯಣ | ಸಿದ್ದಾಪುರ | ಆಜ್ರಿ | 608718 | 81 | 63 | 18 |
| 30 | ಕುಂದಾಪುರ | ಶಂಕರನಾರಾಯಣ | ಅಂಪಾರು | ಅಂಪಾರು | 608715 | 44 | 27 | 17 |
| 31 | ಕುಂದಾಪುರ | ಶಂಕರನಾರಾಯಣ | ಹೊಸಂಗಡಿ | ಹಳ್ಳಿಹೊಳೆ | 608685 | 51 | 47 | 4 |
| 32 | ಕುಂದಾಪುರ | ಶಂಕರನಾರಾಯಣ | ಅಂಪಾರು | ಹಳ್ನಾಡು | 608714 | 7 | 5 | 2 |
| 33 | ಕುಂದಾಪುರ | ಶಂಕರನಾರಾಯಣ | ಹೊಸಂಗಡಿ | ಹೊಸಂಗಡಿ | 608721 | 40 | 29 | 11 |
| 34 | ಕುಂದಾಪುರ | ಶಂಕರನಾರಾಯಣ | ಹೊಸಂಗಡಿ | ಕಮಲಶಿಲೆ | 608719 | 48 | 43 | 5 |
| 35 | ಕುಂದಾಪುರ | ಶಂಕರನಾರಾಯಣ | ಅಂಪಾರು | ಕಾವ್ರಾಡಿ | 608713 | 33 | 25 | 8 |
| 36 | ಕುಂದಾಪುರ | ಶಂಕರನಾರಾಯಣ | ಅಂಪಾರು | ಕುಳುಂಜೆ | 608724 | 39 | 31 | 8 |
| 37 | ಕುಂದಾಪುರ | ಶಂಕರನಾರಾಯಣ | ಹಾಲಾಡಿ | ಮಚ್ಚಟ್ಟು | 608722 | 77 | 55 | 22 |
| 38 | ಕುಂದಾಪುರ | ಶಂಕರನಾರಾಯಣ | ಅಂಪಾರು | ಶಂಕರನಾರಾಯಣ | 608716 | 43 | 30 | 13 |
| 39 | ಕುಂದಾಪುರ | ಶಂಕರನಾರಾಯಣ | ಸಿದ್ದಾಪುರ | ಸಿದ್ದಾಪುರ | 608717 | 124 | 88 | 36 |
| 40 | ಕುಂದಾಪುರ | ಶಂಕರನಾರಾಯಣ | ಸಿದ್ದಾಪುರ | ಉಳ್ಳೂರು-74 | 608723 | 97 | 74 | 23 |
| 41 | ಕುಂದಾಪುರ | ಶಂಕರನಾರಾಯಣ | ಹೊಸಂಗಡಿ | ಯಡಮೊಗೆ | 608720 | 34 | 34 | 0 |
| 42 | ಕುಂದಾಪುರ | ಬೈಂದೂರು | ಬೆಂದೂರು | ಬಿಜೂರು | 608664 | 86 | 44 | 42 |
| 43 | ಕುಂದಾಪುರ | ಬೈಂದೂರು | ಬೆಂದೂರು | ಬೈಂದೂರು ಪಟ್ಟಣ ಪಂಚಾಯತ್ | 608679 | 315 | 262 | 53 |
| 44 | ಕುಂದಾಪುರ | ಬೈಂದೂರು | ಬೆಂದೂರು | ಉಪ್ಪುಂದ | 608663 | 78 | 49 | 29 |
| 45 | ಕುಂದಾಪುರ | ಬೈಂದೂರು | ಬೆಂದೂರು | ಕಂಬದಕೋಣೆ | 608668 | 19 | 14 | 5 |
| 46 | ಕುಂದಾಪುರ | ಬೈಂದೂರು | ಬೆಂದೂರು | ಕೆರ್ಗಾಲ್ | 608666 | 46 | 37 | 9 |
| 47 | ಕುಂದಾಪುರ | ಬೈಂದೂರು | ಶಿರೂರು | ಶಿರೂರು | 608660 | 76 | 75 | 1 |
| 48 | ಕುಂದಾಪುರ | ಬೈಂದೂರು | ಕೊಲ್ಲೂರು | ಗೋಳಿಹೊಳೆ | 608682 | 119 | 102 | 17 |
| 49 | ಕುಂದಾಪುರ | ಬೈಂದೂರು | ಕೊಲ್ಲೂರು | ಕೊಲ್ಲೂರು | 608681 | 53 | 32 | 21 |
| 50 | ಕುಂದಾಪುರ | ಬೈಂದೂರು | ಕೊಲ್ಲೂರು | ಯಳಜಿತ | 608680 | 70 | 42 | 28 |
| 51 | ಕುಂದಾಪುರ | ಬೈಂದೂರು | ಕೊಲ್ಲೂರು | ಇಡೂರು | 608707 | 32 | 22 | 10 |
| 52 | ಕುಂದಾಪುರ | ಬೈಂದೂರು | ಕೊಲ್ಲೂರು | ಹೊಸೂರು | 608709 | 39 | 30 | 9 |
| 53 | ಕುಂದಾಪುರ | ಬೈಂದೂರು | ಕೊಲ್ಲೂರು | ಜಡ್ಕಲ್ | 608683 | 68 | 45 | 23 |

| | | | | | | | | |
|---|---|---|---|---|---|---|---|---|
| 54 | ಕುಂದಾಪುರ | ಬೈಂದೂರು | ಕೊಲ್ಲೂರು | ಮುದೂರು | 608684 | 61 | 28 | 33 |
| 55 | ಕುಂದಾಪುರ | ಬೈಂದೂರು | ಕೊಲ್ಲೂರು | ಹೆರೆಂಜಾಲು | 608677 | 65 | 62 | 3 |
| 56 | ಕುಂದಾಪುರ | ಬೈಂದೂರು | ನಾವುಂದ | ಹೇರೂರು | 608675 | 76 | 66 | 10 |
| 57 | ಕುಂದಾಪುರ | ಬೈಂದೂರು | ನಾವುಂದ | ಕಾಲ್ತೋಡು | 608676 | 88 | 70 | 18 |
| 58 | ಕುಂದಾಪುರ | ಬೈಂದೂರು | ನಾವುಂದ | ಕಿರಿಮಂಜೇಶ್ವರ | 608667 | 55 | 41 | 14 |
| 59 | ಕುಂದಾಪುರ | ಬೈಂದೂರು | ನಾವುಂದ | ಮರವಂತೆ | 608672 | 42 | 37 | 5 |
| 60 | ಕುಂದಾಪುರ | ಬೈಂದೂರು | ನಾವುಂದ | ನಾವುಂದ | 608670 | 45 | 40 | 5 |
| 61 | ಕುಂದಾಪುರ | ಬೈಂದೂರು | ನಾವುಂದ | ಉಳ್ಳೂರು-11 | 608669 | 34 | 28 | 6 |
| ಒಟ್ಟು | | | | | | **3093** | **2423** | **670** |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 444 |
| ಸದಸ್ಯರ ಹೆಸರು | : | ಶ್ರೀ ಬಾಲಕೃಷ್ಣ.ಸಿ.ಎನ್ (ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ | : | 16-02-2023 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

****

| | ಪ್ರಶ್ನೆ | ಉತ್ತರ |
|---|---|---|
| ಅ) | ಚನ್ನರಾಯಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ 220/66/11 ಕೆ.ವಿ. ಯಾಚೇನಹಳ್ಳಿ ವಿದ್ಯುತ್ ವಿತರಣ ಕೇಂದ್ರಯ ಅಧಿಕ ಒತ್ತಡದಿಂದಾಗಿ, ಚನ್ನರಾಯಪಟ್ಟಣ ಮತ್ತು ಹೊಳೇನರಸೀಪುರ ತಾಲ್ಲೂಕಿನ ಗ್ರಾಮಗಳಿಗೆ ವಿದ್ಯುತ್ ಸರಬರಾಜಿನಲ್ಲಿ ವ್ಯತ್ಯಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚನ್ನರಾಯಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ 220/66/11 ಕೆ.ವಿ ಯಾಚೇನಹಳ್ಳಿ ವಿದ್ಯುತ್ ಸ್ವೀಕರಣಾ ಕೇಂದ್ರದಿಂದ ಚನ್ನರಾಯಪಟ್ಟಣ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ಹಾಗೂ ಭಾಗಶ: ಹೊಳೆನರಸೀಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ವಿದ್ಯುತ್ ಸರಬರಾಜಾಗುತ್ತಿದೆ. ಪ್ರಸ್ತುತ ಚನ್ನರಾಯಪಟ್ಟಣ ಮತ್ತು ಹೊಳೆನರಸೀಪುರ ತಾಲ್ಲೂಕಿನ ಗ್ರಾಮಗಳಲ್ಲಿನ ಎನ್.ಜೆ.ವೈ/ ಕುಡಿಯುವ ನೀರಿನ ಮಾರ್ಗಗಳಿಗೆ 22-24 ಗಂಟೆಗಳ ಕಾಲ ಮೂರು ಫೇಸ್ ವಿದ್ಯುತ್ ಹಾಗೂ ಸದರಿ ತಾಲ್ಲೂಕಿನ ಕೃಷಿ ಮಾರ್ಗಗಳಿಗೆ ಹಗಲಿನ ವೇಳೆಯಲ್ಲಿ 07 ಗಂಟೆಗಳ ಮೂರು ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | 220/66/11/ ಕೆ.ವಿ. ಯಾಚೇನಹಳ್ಳಿ ವಿದ್ಯುತ್ ವಿತರಣಾ ಕೇಂದ್ರದಿಂದ ಪ್ರಸ್ತುತ ಎರಡು ತಾಲ್ಲೂಕುಗಳಿಗೆ ವಿದ್ಯುತ್ ವಿತರಣೆ ಮಾಡುತ್ತಿದ್ದು, ಚನ್ನರಾಯಪಟ್ಟಣ ತಾಲ್ಲೂಕಿಗೆ ಪ್ರತ್ಯೇಕ 220/66/11 ಕೆ.ವಿ. ವಿ.ವಿ.ಕೇಂದ್ರದ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಾಲಿ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ 2x100 ಎಂ.ವಿ.ಎ, 220/66/11 ಕೆ.ವಿ ಯಾಚೇನಹಳ್ಳಿ ವಿದ್ಯುತ್ ಸ್ವೀಕರಣಾ ಕೇಂದ್ರ ಕಾರ್ಯನಿರ್ವಹಿಸುತ್ತಿದ್ದು, ಸದರಿ ವಿದ್ಯುತ್ ವಿತರಣಾ ಕೇಂದ್ರದ ಹೊರೆಯು ಅಧಿಕವಾಗಿರುವುದರಿಂದ, ಚನ್ನರಾಯಪಟ್ಟಣ ತಾಲ್ಲೂಕಿನ ತೆಂಕನಹಳ್ಳಿ (ಕಲ್ಕರೆ) ಗ್ರಾಮದಲ್ಲಿ ಹೊಸದಾಗಿ 2x100 ಎಂ.ವಿ.ಎ. 220/66 ಕೆ.ವಿ ಸ್ವೀಕರಣ ಕೇಂದ್ರ ನಿರ್ಮಾಣ ಮಾಡುವ ಪ್ರಸ್ತಾವನೆಯು ತಾಂತ್ರಿಕ ಅಧ್ಯಯನ ಪರಿಶೀಲನಾ ಹಂತದಲ್ಲಿರುತ್ತದೆ. |
| ಇ) | ಚನ್ನರಾಯಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿನ 66 ಕೆ.ವಿ. ಲೈನುಗಳು ಅಧಿಕ ಒತ್ತಡದಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ವಿಷಯವಾಗಿ ಸರ್ಕಾರವು ತೆಗೆದುಕೊಂಡ ಕ್ರಮಗಳೇನು; | ಚನ್ನರಾಯಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಳಕಂಡ 66 ಕೆ.ವಿ ವಿದ್ಯುತ್ ಮಾರ್ಗಗಳು ಅಧಿಕ ಒತ್ತಡದಿಂದ ಕೂಡಿದ್ದು, ಹೊರೆ ಕಡಿಮೆ ಮಾಡಲು ಕೆಳಕಂಡ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ.<br>1. ಚನ್ನರಾಯಪಟ್ಟಣ – ಹಿರಿಸಾವೆ 66 ಕೆ.ವಿ.ಮಾರ್ಗವು ಅಧಿಕ ಹೊರೆ ಹೊಂದಿದ್ದು, ಸದರಿ 66 ಕೆ.ವಿ SC ಮಾರ್ಗವನ್ನು 66 ಕೆ.ವಿ DC ಮಾರ್ಗವಾಗಿ ಬದಲಾಯಿಸಲು 88ನೇ |

| | | |
|---|---|---|
| | | ತಾಂತ್ರಿಕ ಸಮನ್ವಯ ಸಮಿತಿ ಸಭೆಯಲ್ಲಿ ಅನುಮೋದನೆಗೊಂಡಿದ್ದು, ಅಂದಾಜು ಪಟ್ಟಿ ತಯಾರಿಕೆ ಹಂತದಲ್ಲಿರುತ್ತದೆ.<br>2. ಚನ್ನರಾಯಪಟ್ಟಣ–ಉದಯಪುರ 66 ಕೆ.ವಿ. ವಿದ್ಯುತ್ ಮಾರ್ಗದಿಂದ ಜೋಡಣೆಯಾಗಿರುವ 66ಕೆ.ವಿ ಸಾತೇನಹಳ್ಳಿ, 66ಕೆ.ವಿ ರಾಂಪುರ ಮಾರ್ಗವು ಅಧಿಕ ಹೊರೆ ಹೊಂದಿದ್ದು, ಸದರಿ ಮಾರ್ಗದ ಹೊರೆಯನ್ನು ಹಾಸನ ತಾಲ್ಲೂಕು ದುದ್ದ ಗ್ರಾಮದಲ್ಲಿ ನೂತನವಾಗಿ ನಿರ್ಮಿಸುವ 220/110/66 ಕೆ.ವಿ ಸ್ವೀಕರಣಾ ಕೇಂದ್ರಕ್ಕೆ ವರ್ಗಾಯಿಸಲು ಡಿ.ಪಿ.ಆರ್. ಅನುಮೋದನೆಗೊಂಡಿದ್ದು, ಸದರಿ ಕಾಮಗಾರಿಯು ಟೆಂಡರ್ ಪ್ರಕ್ರಿಯೆ ಹಂತದಲ್ಲಿರುತ್ತದೆ.<br>3. 220ಕೆ.ವಿ ಯಾಚೇನಹಳ್ಳಿ ಸ್ವೀಕರಣಾ ಕೇಂದ್ರದಿಂದ 66ಕೆ.ವಿ ಚನ್ನರಾಯಪಟ್ಟಣ ವಿದ್ಯುತ್ ವಿತರಣಾ ಕೇಂದ್ರಕ್ಕೆ ಹಾಲಿ ಇರುವ ಕಯೋಟ್ ವಾಹಕವನ್ನು ಹೆಚ್.ಟಿ.ಎಲ್.ಎಸ್ ವಾಹಕದಿಂದ ಉನ್ನತೀಕರಿಸಲು ಡಿ.ಪಿ.ಆರ್ ಅನುಮೋದನೆಗೊಂಡಿದ್ದು, ಸದರಿ ಕಾಮಗಾರಿಗೆ ಟೆಂಡರ್ ಕರೆದಿದ್ದು, ಸಿಂಗಲ್ ಬಿಡ್ ಆದ ಕಾರಣ ಟೆಂಡರ್‌ನ್ನು ರದ್ದುಗೊಳಿಸಲಾಗಿರುತ್ತದೆ. ಸದರಿ ಕಾಮಗಾರಿಗೆ ಮತ್ತೊಮ್ಮೆ ಟೆಂಡರ್ ಕರೆಯಲು ಕ್ರಮ ವಹಿಸಲಾಗಿರುತ್ತದೆ. |
| ಈ) | ಚನ್ನರಾಯಪಟ್ಟಣ ತಾಲ್ಲೂಕು ನುಗ್ಗೇಹಳ್ಳಿ ಹೋಬಳಿ ತೆಂಕನಹಳ್ಳಿ ಗ್ರಾಮದಲ್ಲಿ ಕೆಪಿಟಿಸಿಎಲ್‌ಗೆ ಸೇರಿದ 10 ಎಕರೆ ಜಾಗವಿದ್ದು, ಆ ಜಾಗದಲ್ಲಿ ನೂತನ 220/66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರ ಸ್ಥಾಪಿಸಲು ಇರುವ ತೊಡಕುಗಳೇನು? (ವಿವರ ನೀಡುವುದು) | ಹಾಲಿ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ 2x100 ಎಂ.ವಿ.ಎ, 220/66/11 ಕೆ.ವಿ ಯಾಚೇನಹಳ್ಳಿ ವಿದ್ಯುತ್ ಸ್ವೀಕರಣಾ ಕೇಂದ್ರ ಕಾರ್ಯನಿರ್ವಹಿಸುತ್ತಿದ್ದು, ಸದರಿ ವಿದ್ಯುತ್ ವಿತರಣಾ ಕೇಂದ್ರದ ಹೊರೆಯು ಅಧಿಕವಾಗಿರುವುದರಿಂದ, ಚನ್ನರಾಯಪಟ್ಟಣ ತಾಲ್ಲೂಕಿನ ನುಗ್ಗೇನಹಳ್ಳಿ ಹೋಬಳಿ ತೆಂಕನಹಳ್ಳಿ (ಕಲ್ಕೆರೆ) ಗ್ರಾಮದಲ್ಲಿ ಕವಿಪ್ರನಿನಿಗೆ ಸೇರಿದ 10 ಎಕರೆ ಜಾಗವಿದ್ದು, ಸದರಿ ಜಾಗದಲ್ಲಿ ಹೊಸದಾಗಿ 2x100 ಎಂ.ವಿ.ಎ, 220/66 ಕೆ.ವಿ ಸ್ವೀಕರಣ ಕೇಂದ್ರ ನಿರ್ಮಾಣ ಮಾಡುವ ಪ್ರಸ್ತಾವನೆಯು ತಾಂತ್ರಿಕ ಅಧ್ಯಯನ ಪರಿಶೀಲನಾ ಹಂತದಲ್ಲಿರುತ್ತದೆ. |

ಸಂಖ್ಯೆ: ಇಎನ್ 18 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು
ಇಂಧನ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 445

ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ.ಸಿ.ಎನ್ (ಶ್ರವಣ ಬೆಳಗೊಳ)

ಉತ್ತರಿಸಬೇಕಾದ ದಿನಾಂಕ : 16-02-2023

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿರುವ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಕಳೆದ ಮೂರು ವರ್ಷಗಳಿಂದ ನೀಡಿರುವ ಅನುದಾನವೆಷ್ಟು; (ವರ್ಷವಾರು ಮಾಹಿತಿ ನೀಡುವುದು)</td><td>ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಯಮಿತ ವ್ಯಾಪ್ತಿಯ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಸೆಸ್ಕ್‌ನ ಬಂಡವಾಳ ಕಾಮಗಾರಿಗಳಡಿ ಕಳೆದ ಮೂರು ವರ್ಷಗಳಲ್ಲಿ ಮಾಡಲಾಗಿರುವ ಬಜೆಟ್ ಹಂಚಿಕೆ ವಿವರಗಳು ಕೆಳಕಂಡಂತಿದೆ.<br><br>
<table>
<tr><th>ವರ್ಷ</th><th>ಬಜೆಟ್ ಹಂಚಿಕೆ (ರೂ ಲಕ್ಷಗಳಲ್ಲಿ)</th></tr>
<tr><td>2020-21</td><td>233.20</td></tr>
<tr><td>2021-22</td><td>337.92</td></tr>
<tr><td>2022-23</td><td>172.75</td></tr>
</table></td></tr>
<tr><td>ಆ)</td><td>ಹಾಸನ ಜಿಲ್ಲೆಯಲ್ಲಿನ ವಿದ್ಯುತ್ ರಹಿತ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಸಲುವಾಗಿ ಕಳೆದ ಮೂರು ವರ್ಷಗಳಿಂದ ಬಿಡುಗಡೆಯಾದ ಅನುದಾನವೆಷ್ಟು; ಆ ಪೈಕಿ ಖರ್ಚಾದ ಅನುದಾನವೆಷ್ಟು;</td><td rowspan="2">ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಯಮಿತ ವ್ಯಾಪ್ತಿಯಲ್ಲಿ, ಸರ್ಕಾರದ ಆದೇಶದಂತೆ 2021-22 ನೇ ಸಾಲಿನಿಂದ ಬೆಳಕು ಯೋಜನೆಯಡಿ ವಿದ್ಯುತ್ ಸಂಪರ್ಕವಿಲ್ಲದ ಬಡಕುಟುಂಬದ ಮನೆಗಳಿಗೆ ದೀನ ದಯಾಳ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆ ಮತ್ತು ಸೌಭಾಗ್ಯ ಯೋಜನೆಗಳ ಮಾದರಿಯಲ್ಲಿಯೇ ನಿಗಮದ ಬಂಡವಾಳ ಕಾಮಗಾರಿ ಮೊತ್ತವನ್ನು ಬಳಸಿಕೊಂಡು ವಿದ್ಯುತ್ ಸಂಪರ್ಕ ಕಲ್ಪಿಸಲು ಆದೇಶಿಸಲಾಗಿರುತ್ತದೆ.<br><br>ಬೆಳಕು ಯೋಜನೆಯಡಿ ವಿದ್ಯುತ್ ರಹಿತ ಬಡ ಕುಟುಂಬದ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಸೆಸ್ಕ್‌ನ ಬಂಡವಾಳ ಕಾಮಗಾರಿಗಳಡಿ ಹಾಸನ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ಮಾಡಲಾಗಿರುವ ಬಜೆಟ್ ಹಂಚಿಕೆ ವಿವರಗಳು ಕೆಳಕಂಡಂತಿದೆ.<br><br>
<table>
<tr><th>ವರ್ಷ</th><th>ಬಜೆಟ್ ಹಂಚಿಕೆ (ರೂ ಲಕ್ಷಗಳಲ್ಲಿ)</th><th>ಖರ್ಚಾದ ಬಜೆಟ್ (ರೂ ಲಕ್ಷಗಳಲ್ಲಿ)</th></tr>
<tr><td>2020-21</td><td>-</td><td>-</td></tr>
<tr><td>2021-22</td><td>574.29</td><td>55.58</td></tr>
<tr><td>2022-23</td><td>592.58</td><td>130.72<br>(ಜನವರಿ 23ರ ಅಂತ್ಯಕ್ಕೆ)</td></tr>
</table></td></tr>
<tr><td>ಇ)</td><td>ಕಳೆದ ಎರಡು ವರ್ಷಗಳಿಂದ ವಿದ್ಯುತ್ ರಹಿತ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ವಿಭಾಗಗಳಿಗೆ ಕಡಿಮೆ ಅನುದಾನ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?</td></tr>
</table>

ಸಂಖ್ಯೆ:ಎನರ್ಜಿ 24 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 446
**ಮಾನ್ಯ ಸದಸ್ಯರ ಹೆಸರು** : ಶ್ರೀ ನರೇಂದ್ರ ಆರ್. (ಹನೂರು)
**ಉತ್ತರಿಸಬೇಕಾದ ದಿನಾಂಕ** : 16-02-2023
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಚಾಮರಾಜನಗರ ಜಿಲ್ಲೆಯ ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪ್ರವಾಸಿ ತಾಣಗಳ ಅಭಿವೃದ್ಧಿಗೆ ಸರ್ಕಾರದಿಂದ ನೀಡಿರುವ ಅನುದಾನವೆಷ್ಟು; (ವರ್ಷವಾರು, ಪ್ರವಾಸಿತಾಣವಾರು ವಿವರ ನೀಡುವುದು) | 2019-20ನೇ ಸಾಲಿನಲ್ಲಿ ಕೆಟಿವಿಜಿ ಲೆಕ್ಕಶೀರ್ಷಿಕೆಯಡಿ ಚಾಮರಾಜನಗರ ಜಿಲ್ಲೆ ಮಲೆಮಹದೇಶ್ವರ ದೇವಾಲಯದ ಮುಖ್ಯದ್ವಾರದಿಂದ ಪ್ರವಾಸಿ ಮಂದಿರಕ್ಕೆ ಸಿ.ಸಿ.ರಸ್ತೆ ನಿರ್ಮಾಣ ಕಾಮಗಾರಿಯನ್ನು ರೂ.200.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಅನುಮೋದನೆ ನೀಡಲಾಗಿರುತ್ತದೆ. ಕಾಮಗಾರಿಗೆ ಪೂರ್ಣ ಅನುದಾನ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br><br>2020-21, 2021-22ನೇ ಸಾಲುಗಳಲ್ಲಿ ಹನೂರು ವಿಧಾನಸಭಾ ಕ್ಷೇತ್ರಕ್ಕೆ ಅನುದಾನ ಮಂಜೂರಾಗಿರುವುದಿಲ್ಲ. |
| ಆ) | ಈ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ "ಹೊಗೇನಿಕಲ್ ಫಾಲ್ಸ್" ಪ್ರವಾಸಿತಾಣವನ್ನು ಅಭಿವೃದ್ಧಿಪಡಿಸದಿರಲು ಕಾರಣವೇನು? (ವಿವರ ನೀಡುವುದು) | 2014-15ನೇ ಸಾಲಿನಲ್ಲಿ ಬಂಡವಾಳ ಲೆಕ್ಕಶೀರ್ಷಿಕೆಯಡಿಯಲ್ಲಿ ಚಾಮರಾಜನಗರ ಜಿಲ್ಲೆ ಕೊಳ್ಳೇಗಾಲ ತಾಲ್ಲೂಕಿನ ಹೊಗೇನಕಲ್ ಜಲಪಾತದಲ್ಲಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿಯನ್ನು ರೂ.44.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಅನುಮೋದನೆ ನೀಡಲಾಗಿರುತ್ತದೆ. ಸದರಿ ಕಾಮಗಾರಿಗೆ ಈವರೆಗೂ ರೂ.29.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಚಾಮರಾಜನಗರ ಜಿಲ್ಲೆ ರವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಕಾಮಗಾರಿ ಪೂರ್ಣಗೊಂಡಿದೆ. |

**TOR 22 TDV 2023**

**(ಆನಂದ್ ಸಿಂಗ್)**
ಪ್ರವಾಸೋದ್ಯಮ,
ಜೀವಿಶಾಸ್ತ್ರ ಮತ್ತು ಪರಿಸರ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 447
2. ಸದಸ್ಯರ ಹೆಸರು : ಶ್ರೀ ಮಂಜುನಾಥ .ಎ
3. ಉತ್ತರಿಸಬೇಕಾದ ದಿನಾಂಕ : 21.02.2023

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಮಂಚನಬೆಲೆ ಜಲಾಶಯದ ಪ್ರದೇಶದಲ್ಲಿ 2018-19ನೇ ಸಾಲಿನ ಆಯವ್ಯಯದಲ್ಲಿ ರೂ.125 ಕೋಟಿ ವೆಚ್ಚದಲ್ಲಿ ಅಮ್ಯೂಸ್‌ಮೆಂಟ್ ಪಾರ್ಕ್ ನಿರ್ಮಾಣ ಮಾಡಲು ಘೋಷಿಸಿದ್ದರೂ ಸಹ ಇದುವರೆವಿಗೂ ಅನುಮೋದನೆ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಚನಬೆಲೆ ಜಲಾಶಯವು ರಾಮನಗರ ಜಿಲ್ಲೆಯ ಪ್ರವಾಸಿ ತಾಣಗಳಲ್ಲಿ ಒಂದಾಗಿದ್ದು ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಜಲಾಶಯವನ್ನು ವೀಕ್ಷಿಸಲು ಭೇಟಿ ನೀಡುತ್ತಾರೆ. ಪ್ರವಾಸೋದ್ಯಮಕ್ಕೆ ಉತ್ತೇಜನ ನೀಡುವ ಸಲುವಾಗಿ 2019-20 ನೇ ಸಾಲಿನ ಆಯವ್ಯಯ ಭಾಷಣದಲ್ಲಿ "125 ಕೋಟಿ ರೂ. ವೆಚ್ಚದಲ್ಲಿ ಮಂಚನಬೆಲೆ ಜಲಾಶಯದ ಕೆಳಭಾಗದ ಉದ್ಯಾನವನದ ಅಭಿವೃದ್ಧಿ, ಸೌಂದರ್ಯೀಕರಣ ಹಾಗೂ ಪ್ರವಾಸೋದ್ಯಮ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳಲಾಗುವುದು" ಎಂದು ಘೋಷಣೆ ಮಾಡಲಾಗಿರುತ್ತದೆ.<br><br>ಮಂಚನಬೆಲೆ ಜಲಾಶಯದ ಕೆಳಗೆ 72.00 ಎಕರೆ ಪ್ರದೇಶದಲ್ಲಿ ಉದ್ಯಾನವನವನ್ನು ಅಭಿವೃದ್ಧಿಪಡಿಸುವ ಯೋಜನೆಯನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ-ಪಿ.ಪಿ.ಪಿ (DBFOT) ಮಾದರಿಯಲ್ಲಿ ಕೈಗೊಳ್ಳಲು ರೂ.144.69 ಕೋಟಿ ವೆಚ್ಚದ ಪ್ರಸ್ತಾವನೆಯನ್ನು ತಯಾರಿಸಲಾಗಿರುತ್ತದೆ. ಸದರಿ ಪ್ರಸ್ತಾವನೆಗೆ PPP |
| ಆ) | ಬಂದಿದ್ದಲ್ಲಿ, ಈ ಅಮ್ಯೂಸ್‌ಮೆಂಟ್ ಪಾರ್ಕಿನ ನಿರ್ಮಾಣದ ಕಾಮಗಾರಿಯನ್ನು ಕೈಗೊಳ್ಳಲು ಯಾವಾಗ ಅನುಮೋದನೆ ನೀಡಿ ಪ್ರಾರಂಭಿಸಲಾಗುವುದು;<br>(ಮಾಹಿತಿ ನೀಡುವುದು) | Projects ಗಳ Appraisal Committee ಯ ದಿನಾಂಕ:27.06.2022ರ ಸಭೆಯಲ್ಲಿ ತೆರವು ನೀಡಿದ್ದು, ಸದರಿ ಪ್ರಸ್ತಾವನೆಯನ್ನು ದಿನಾಂಕ:24.08.2022 ರಂದು ನಡೆದ 23ನೇ Single Level Single Window Agency (SLSWA) ಸಭೆಯಿಂದ ಅನುಮೋದನೆ ಪಡೆದು, ತದನಂತರ ದಿನಾಂಕ: 09.01.2023 ರಂದು ನಡೆದ ಕಾವೇರಿ ನೀರಾವರಿ ನಿಗಮ ಮಂಡಳಿಯ 79ನೇ ಸಭೆಯಲ್ಲಿ ಪ್ರಸ್ತಾವನೆಯನ್ನು ಮಂಡಿಸಿ ಅನುಮೋದನೆ ಪಡೆಯಲಾಗಿದೆ.<br><br>ಸದರಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |

ಸಂಖ್ಯೆ:ಜಸಂಇ 18 ಎನ್‌ಎಲ್‌ಎ 2023

( ಗೋವಿಂದ ಎಂ. ಕಾರಜೋಳ )
ಜಲಸಂಪನ್ಮೂಲ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 449 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಂಜುನಾಥ್ ಎ. (ಮಾಗಡಿ) |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 16.02.2023 |

<table>
<tr><th>ಕ್ರಮ. ಸಂಖ್ಯೆ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಕೆಲ ವರ್ಷಗಳಿಂದ ಬೆಂಗಳೂರು ವಿಶ್ವವಿದ್ಯಾಲಯದಿಂದ ಪರೀಕ್ಷಾ ಫಲಿತಾಂಶಗಳನ್ನು ಪ್ರಕಟಿಸುವಲ್ಲಿ ತೀರ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳ Semester Wise ಫಲಿತಾಂಶವನ್ನು ಆಯಾ ಅವಧಿಯ ಪರೀಕ್ಷೆ ಮುಗಿದು ಮೌಲ್ಯಮಾಪನ ಆದಕೂಡಲೇ ಯಾವುದೇ ವಿಳಂಬವಿಲ್ಲದೆ ಕಾಲಕಾಲಕ್ಕೆ ಪ್ರಕಟಿಸಲಾಗಿದೆ.<br>ಬೆಂಗಳೂರು ವಿಶ್ವವಿದ್ಯಾಲಯ ಪ್ರತಿ ಸೆಮಿಸ್ಟರ್ ಪರೀಕ್ಷೆ ಕೊನೆಗೊಂಡ ಮೇಲೆ ಮೌಲ್ಯಮಾಪನದ ನಂತರ ಈ ಕೆಳಕಂಡಂತೆ ಫಲಿತಾಂಶವನ್ನು ವಿಳಂಬವಾಗದೆ ಪ್ರಕಟಿಸಲಾಗಿದೆ.<br><u>UG End of the Exam Result Date</u>
<table>
<tr><th>Exam</th><th>Result Announced Start Date</th><th>Result Announced end Date</th><th></th></tr>
<tr><td>May-2018</td><td>07.07.2018</td><td>30.07.2018</td><td>Even Semester</td></tr>
<tr><td>Nov-2018</td><td>06.03.2019</td><td>29.04.2019</td><td>Odd Semester</td></tr>
<tr><td>May-2018</td><td>23.07.2019</td><td>03.08.2019</td><td>Even Semester</td></tr>
<tr><td>Nov-2019</td><td>18.02.2020</td><td>04.09.2020</td><td>Odd Semester (Covid-19)</td></tr>
<tr><td>Sep-2020</td><td>13.09.2020</td><td>02.11.2020</td><td>Even Semester (Covid-19)</td></tr>
<tr><td>Mar-2021</td><td>18.09.2021</td><td>01.10.2021</td><td>Odd Semester</td></tr>
<tr><td>Aug-2021</td><td>19.02.2022</td><td>30.02.2022</td><td>Even Semester</td></tr>
</table>
ಕೆಲವೊಂದು ವಿದ್ಯಾರ್ಥಿಗಳ ನೊಂದಣಿ ಸಂಖ್ಯೆ ಮತ್ತು ವಿದ್ಯಾರ್ಥಿಗಳ ಆಂತರಿಕ ಅಂಕಗಳನ್ನು ಕಾಲೇಜುಗಳಿಂದ ಸ್ಪಷ್ಟ ಮಾಹಿತಿ ಕೊಡದೇ ಇರುವ ಕಾರಣ ಫಲಿತಾಂಶ ನೀಡಲು ವಿಳಂಭವಾಗಿರುತ್ತದೆ. ಹಲವು ಬಾರಿ ಸಂಬಂಧಪಟ್ಟ ಪ್ರಾಂಶುಪಾಲರಿಗೆ ಪತ್ರದ ಮುಖಾಂತರ ತಿಳಿಸಿದರೂ ಸಹ: ವಿವರಣೆ ನೀಡಿರುವುದಿಲ್ಲ. ಈಗಾಗಲೇ ಕಾಲೇಜಿನ ಪ್ರಾಂಶುಪಾಲರು ವಿವರಣೆ ನೀಡಿರುವಂತಹ ಕಾಲೇಜಿಗೆ ಫಲಿತಾಂಶ ಪ್ರಕಟಿಸಲಾಗಿದೆ.<br>2021-22ನೇ ಸಾಲಿನ ಸ್ನಾತಕ NEP ಮತ್ತು ಸ್ನಾತಕೋತ್ತರ UUCMS ಕೆಲವೊಂದು ವಿಭಾಗ/ಕಾಲೇಜುಗಳ ಫಲಿತಾಂಶ ಈಗಾಗಲೇ ಪ್ರಕಟಣೆ ಮಾಡಲಾಗಿದೆ. ಇನ್ನೂಳಿದ ಕೆಲವು ವಿಭಾಗ/ಕಾಲೇಜುಗಳ ಫಲಿತಾಂಶವನ್ನು ಆಂತರಿಕ ಮತ್ತು ಪ್ರಾಯೋಗಿಕ ಪರೀಕ್ಷೆಯ ಅಂಕಗಳನ್ನು ಕೆಲವೊಂದು ಕಾಲೇಜಿನವರು UUCMS ಪೋರ್ಟಲ್‌ನಲ್ಲಿ ಸರಿಯಾದ ಮಾಹಿತಿ ಸಲ್ಲಿಸದ ಕಾರಣ ಫಲಿತಾಂಶ ನೀಡುವಲ್ಲಿ ವಿಳಂಬವಾಗಿದೆ. ಕಾಲೇಜಿನಿಂದ ವಿವರಣೆ ಬಂದ ಕೂಡಲೇ ಫಲಿತಾಂಶವನ್ನು</td></tr>
</table>

| | | |
|---|---|---|
| | | ಪ್ರಕಟಿಸಲಾಗುವುದು. ಈ ಸಂಬಂಧವಾಗಿ ಕಾಲೇಜಿನ ಪ್ರಾಂಶುಪಾಲರಿಗೆ ಮಾಹಿತಿ ಸಲ್ಲಿಸುವಂತೆ ಕೋರಲಾಗಿದೆ. UUCMS ಟೀಮ್‌ನೊಂದಿಗೆ ನಿರಂತರ ಸಮಾಲೋಚನೆ ನಡೆಸಿ ಇನ್ನುಳಿದ ವಿದ್ಯಾರ್ಥಿಗಳ ಫಲಿತಾಂಶವನ್ನು ಶೀಘ್ರದಲ್ಲಿ ಪ್ರಕಟಿಸಲು ಕ್ರಮವಹಿಸಲಾಗುವುದು. |
| **ಆ)** | ಈ ವಿಳಂಬ ಧೋರಣೆಯಿಂದಾಗಿ ಅನೇಕ ವಿದ್ಯಾರ್ಥಿಗಳಿಗೆ ಆಗುತ್ತಿರುವ ಸಮಸ್ಯೆಗಳ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು: (ಮಾಹಿತಿ ನೀಡುವುದು) | ಬೆಂಗಳೂರು ವಿಶ್ವವಿದ್ಯಾಲಯವು ನಿಗಧಿತ ಅವಧಿಯಲ್ಲಿ ವಿದ್ಯಾರ್ಥಿಗಳ ಕುಂದುಕೊರತೆಗಳನ್ನು ಪರಿಗಣಿಸಿ ಸೂಕ್ತ ಕ್ರಮವಹಿಸಲಾಗುತ್ತಿದೆ. ಈ ವಿಷಯಕ್ಕೆ ಸಂಬಂಧಪಟ್ಟಂತೆ **UUCMS ಬಗ್ಗೆ ಕಾರ್ಯಗಾರಗಳನ್ನು ನಡೆಸಲಾಗಿದೆ. ಈ ವಿಷಯದಲ್ಲಿ ಸರ್ಕಾರವು ಹಲವು ಸುಧಾರಣೆಗಳನ್ನು ಕೈಗೊಂಡಿದೆ. UUCMS ವ್ಯವಸ್ಥೆಯಿಂದ ವಿಶ್ವವಿದ್ಯಾಲಯಗಳಿಗೆ ಸಾಕಷ್ಟು ಅನುಕೂಲಗಳಾಗಿರುತ್ತದೆ. ಫಲಿತಾಂಶ ಪ್ರಕ್ರಿಯೆ ಮತ್ತು ಪ್ರಕಟಿಸುವಲ್ಲಿ ಬಹಳಷ್ಟು ಸ್ನೇಹಮಯಿಯಾಗಿರುತ್ತದೆ.** |
| **ಇ)** | ಪರೀಕ್ಷಾ ಫಲಿತಾಂಶದ ವಿಳಂಬತೆಯಿಂದಾಗಿ ಮುಂದಿನ ತರಗತಿಗಳಿಗೆ ಅಥವಾ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಭಾಗವಹಿಸಲು ವಿದ್ಯಾರ್ಥಿಗಳಿಗೆ ಆಗುತ್ತಿರುವ | |
| | ತೊಂದರೆಗಳನ್ನು ಪರಿಹರಿಸುವ ದಿಶೆಯಲ್ಲಿ ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಉನ್ನತ ಶಿಕ್ಷಣ ಇಲಾಖೆಯಿಂದ Common Calendar of Events ಮಾಡಿದ್ದು ಎಲ್ಲಾ ವಿಶ್ವವಿದ್ಯಾಲಯದವರಿಗೆ ಇದನ್ನು ಅಳವಡಿಸಿಕೊಳ್ಳಲು ತಿಳಿಸಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯವು ಈ Common Calendar of Eventsಗಳನ್ನು ಅಳವಡಿಸಿಕೊಳ್ಳಲಾಗಿದ್ದು ಫಲಿತಾಂಶಗಳಲ್ಲಿ ಯಾವುದೇ ರೀತಿ ವಿಳಂಬವಾಗದೇ ಎಚ್ಚರಿಕೆಯಿಂದ ಕ್ರಮ ವಹಿಸಲಾಗುವುದು ಮತ್ತು ವಿದ್ಯಾರ್ಥಿಗಳಿಗೆ ಯಾವುದೇ ತೊಂದರೆಯಾಗದಂತೆ ಕಾಲಕಾಲಕ್ಕೆ ಫಲಿತಾಂಶವನ್ನು ಪ್ರಕಟಿಸಲಾಗುತ್ತಿದೆ ಹಾಗೂ ಮುಂದಿನ ವಿದ್ಯಾಭ್ಯಾಸಕ್ಕೆ ಯಾವುದೇ ತೊಂದರೆಯಾಗದಂತೆ ಕ್ರಮ ವಹಿಸಲಾಗುವುದು. |

**ಸಂಖ್ಯೆ: ಇಡಿ/26 /ಯುಬಿವಿ /2023**

**(ಡಾ|| ಅಶ್ವತ್ಥ್ ನಾರಾಯಣ ಸಿ.ಎನ್.)**

ಉನ್ನತ ಶಿಕ್ಷಣ, ಐಟಿ -ಬಿಟಿ ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಜೀವನೋಪಾಯ
ಹಾಗೂ ಉದ್ಯಮಶೀಲತೆ ಇಲಾಖೆ ಸಚಿವರು.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 450
**ಮಾನ್ಯ ಸದಸ್ಯರ ಹೆಸರು** : ಶ್ರೀ ಮಂಜುನಾಥ್ ಎ. (ಮಾಗಡಿ)
**ಉತ್ತರಿಸಬೇಕಾದ ದಿನಾಂಕ** : 16-02-2023
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಾಗಡಿ ಪಟ್ಟಣದ ನಾಡಪ್ರಭು ಕೆಂಪೇಗೌಡರು ನಿರ್ಮಿಸಿರುವ ವಿಶ್ವ ಪ್ರಸಿದ್ಧ ಕೆಂಪೇಗೌಡರ ಕೋಟೆಯು ನಶಿಸಿ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ |
| ಆ) | ಕೆಂಪೇಗೌಡರ ಕೋಟೆ ಅಭಿವೃದ್ಧಿಪಡಿಸುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ; | |
| ಇ) | ಬಂದಿದ್ದಲ್ಲಿ ಸರ್ಕಾರವು ಆ ಸಂಬಂಧದಲ್ಲಿ ತೆಗೆದುಕೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿಯನ್ನು ನೀಡುವುದು) | ಮಾಗಡಿ ಕೋಟೆಯ ಒಟ್ಟಾರೆ ಉದ್ದ 1030 ಮೀಟರ್ ಇದ್ದು, ಇದರಲ್ಲಿ 528 ಮೀಟರ್‌ಗಳನ್ನು ಸಂರಕ್ಷಿಸಿ ಪೂರ್ಣಗೊಳಿಸಲಾಗಿರುತ್ತದೆ.<br><br>ಪ್ರಸ್ತುತ, ಬಾಕಿ ಉಳಿದಿರುವ 502 ಮೀಟರ್ ಕೋಟೆ ಗೋಡೆಯ ಸಂರಕ್ಷಣೆಗೆ, ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವತಿಯಿಂದ ರೂ.570.00 ಲಕ್ಷಗಳ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ ಸಲ್ಲಿಸಿದ್ದು, ಕಾಮಗಾರಿಯನ್ನು ಮಂಜೂರು ಮಾಡುವ ಸಂಬಂಧ ಆಯವ್ಯಯದಲ್ಲಿ ಇಲಾಖೆಗೆ ಒದಗಿಸಿರುವ ಅನುದಾನದ ಲಭ್ಯತೆಗನುಗುಣವಾಗಿ ನಿಯಮಾನುಸಾರ ಪರಿಶೀಲಿಸಿ ಮುಂದಿನ ಕ್ರಮವಹಿಸಲಾಗುವುದು. |
| ಈ) | ಕೆಂಪೇಗೌಡರ ಕೋಟೆಯ ಪುನಶ್ಚೇತನ ಕಾಮಗಾರಿ/ ಮರುನಿರ್ಮಾಣ/ ಪ್ರವಾಸಿ ತಾಣವಾಗಿ ಅಭಿವೃದ್ಧಿಪಡಿಸುವ ಕಾರ್ಯವನ್ನು ಸರ್ಕಾರವು ಯಾವಾಗ ಕೈಗೊಳ್ಳಲಿದೆ? (ಮಾಹಿತಿ ನೀಡುವುದು) | |

**TOR 19 TDV 2023**

**(ಆನಂದ್ ಸಿಂಗ್)**
ಪ್ರವಾಸೋದ್ಯಮ,
ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 484

ಸದಸ್ಯರ ಹೆಸರು : ಶ್ರೀ ಮಹದೇವ.ಕೆ (ಪಿರಿಯಾಪಟ್ಟಣ)

ಉತ್ತರಿಸಬೇಕಾದ ದಿನಾಂಕ : 16-02-2023

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಪ್ರಸ್ತುತ ಬೇಡಿಕೆಯಿರುವ ವಿದ್ಯುತ್ ಪರಿಮಾಣ ಎಷ್ಟು; ಈ ಪೈಕಿ ಎಷ್ಟು ಪರಿಮಾಣದ ವಿದ್ಯುತ್ ನ್ನು ಯಾವ ಯಾವ ಮೂಲಗಳಿಂದ ಉತ್ಪಾದಿಸಲಾಗುತ್ತಿದೆ;</td><td>ರಾಜ್ಯದಲ್ಲಿ ಬೇಡಿಕೆಯ ದಿನವಹಿ ಸರಾಸರಿ ಪರಿಮಾಣವು ಏಪ್ರಿಲ್–2022 ರಿಂದ ಜನವರಿ-2023 ಅಂತ್ಯದವರೆಗೆ 204.86 ಮಿ.ಯೂ ಗಳಾಗಿರುತ್ತದೆ.<br><br>ರಾಜ್ಯದಲ್ಲಿ 2022-23ರ ಜನವರಿ-2023ರ ಅಂತ್ಯದವರೆಗೆ ವಿವಿಧ ಮೂಲಗಳಿಂದ ಲಭ್ಯವಾದ ವಿದ್ಯುತ್ತಿನ ಪ್ರಮಾಣದ ವಿವರಗಳು ಕೆಳಕಂಡಂತಿವೆ:-<br><br><table><tr><th>ವಿದ್ಯುತ್ತಿನ ಮೂಲಗಳು</th><th>2022-23ನೇ ಸಾಲಿನಲ್ಲಿ (ಏಪ್ರಿಲ್-2022 ರಿಂದ ಜನವರಿ-2023 ರ ಅಂತ್ಯದವರೆಗೆ) ಲಭ್ಯವಾದ ವಿದ್ಯುತ್ತಿನ ಪ್ರಮಾಣ (ದ.ಲ.ಯೂ.) (ತಾತ್ಕಾಲಿಕ)</th></tr><tr><td>ಜಲ ವಿದ್ಯುತ್</td><td>11247.27</td></tr><tr><td>ಶಾಖೋತ್ಪನ್ನ</td><td>13129.51</td></tr><tr><td>ಕೇಂದ್ರ ಸರ್ಕಾರ ಸ್ವಾಮ್ಯದ ವಿದ್ಯುತ್ ಉತ್ಪಾದನಾ ಘಟಕಗಳಿಂದ ರಾಜ್ಯದ ಪಾಲು</td><td>13153.79</td></tr><tr><td>ಅಸಂಪ್ರದಾಯಿಕ ಮೂಲಗಳಿಂದ</td><td>23727.34</td></tr><tr><td>ಬೃಹತ್ ಐ.ಪಿ.ಪಿ.</td><td>6 0.80</td></tr><tr><td>ಜಿಂದಾಲ್</td><td>798.83</td></tr><tr><td>ಒಟ್ಟು</td><td>62687.54</td></tr></table></td></tr>
<tr><td>ಆ)</td><td>ಬೇಡಿಕೆಗನುಗುಣವಾಗಿ ಸರ್ಕಾರವು ಬೇರೆ ಬೇರೆ ರಾಜ್ಯಗಳಿಂದ ವಿದ್ಯುತ್ ಖರೀದಿಸುತ್ತಿದೆಯೇ; ಹಾಗಿದ್ದಲ್ಲಿ, ವಿದ್ಯುತ್ ಖರೀದಿಗೆ ಪ್ರತಿ ವರ್ಷ ತಗಲುತ್ತಿರುವ ವೆಚ್ಚವೆಷ್ಟು;</td><td>ಪ್ರಸ್ತುತ ರಾಜ್ಯದಲ್ಲಿ ಬೇಡಿಕೆಗೆ ಸೀಮಿತವಾಗಿ ವಿದ್ಯುತ್ ಉತ್ಪಾದನೆಯಾಗುತ್ತಿದ್ದು, ಯಾವುದೇ ಕೊರತೆ ಇರುವುದಿಲ್ಲ.<br><br>ಅನಿವಾರ್ಯ ಸಂದರ್ಭಗಳಲ್ಲಿ ತಾತ್ಕಾಲಿಕ ವಿದ್ಯುತ್ ಕೊರತೆಯನ್ನು ನೀಗಿಸಲು ವಿದ್ಯುತ್ ವಿನಿಮಯ ಕೇಂದ್ರದಿಂದ ಖರೀದಿಸಿದ ವಿದ್ಯುತ್‌ನ ಪ್ರಮಾಣ, ದರ ಹಾಗೂ ವೆಚ್ಚದ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.</td></tr>
<tr><td>ಇ)</td><td>ರಾಜ್ಯದ ವಿವಿಧ ವಿದ್ಯುತ್ ಕಂಪನಿಗಳಿಂದ ಬೇಡಿಕೆಗನುಗುಣವಾಗಿ ವಿದ್ಯುತ್ ಉತ್ಪಾದನೆ ಮಾಡಲು ಸರ್ಕಾರವು ಯಾವ ಯಾವ ಕ್ರಮ ಕೈಗೊಂಡಿದೆ;</td><td>ರಾಜ್ಯದ ವಿವಿಧ ವಿದ್ಯುತ್ ಸರಬರಾಜು ಕಂಪನಿಗಳ ಪ್ರತಿದಿನದ ವಿದ್ಯುತ್ ಬೇಡಿಕೆಗೆ ಅನುಗುಣವಾಗಿ ಜಲ, ಶಾಖೋತ್ಪನ್ನ, PGCIL, ಅಸಂಪ್ರದ್ರಾಯಕ ಮೂಲ ಮತ್ತು ನವೀಕರಿಸಬಹುದಾದ ಇಂಧನ ಮೂಲಗಳಿಂದ ವಿದ್ಯುತ್ತನ್ನು ಪಡೆಯಲಾಗುತ್ತಿದೆ. ಪ್ರಸ್ತುತ ರಾಜ್ಯದಲ್ಲಿ ಬೇಡಿಕೆಗೆ</td></tr>
</table>

| | | |
|---|---|---|
| | | ಅನುಗುಣವಾಗಿ ವಿದ್ಯುತ್ ಉತ್ಪಾದನೆಯಾಗುತ್ತಿರುವುದರಿಂದ ಯಾವುದೇ ಸಮಸ್ಯೆ ಇರುವುದಿಲ್ಲ.<br><br>ಆದಾಗ್ಯೂ, ಮುಂದಿನ 10 ವರ್ಷಗಳ ಅವಧಿಯಲ್ಲಿ ಉಂಟಾಗಬಹುದಾದ ವಿದ್ಯುತ್ ಬೇಡಿಕೆಯನ್ನು ಅಂದಾಜಿಸಲು ಪಿಸಿಕೆಎಲ್ ಕಂಪನಿಯು POWER RESEARCH DEVELOPMENT CONSULTANTS PVT LTD. (PRDC) ರವರಿಂದ ಅಧ್ಯಯನ ಮಾಡಿಸಿ ಸಮಗ್ರ ವರದಿಯನ್ನು ಪಡೆಯಲಾಗಿದೆ ಹಾಗೂ ಭಾರತ ಸರ್ಕಾರವು (GOI) 2030 ರ ವೇಳೆಗೆ 500GW ನ RE ಗುರಿಯನ್ನು ತಲುಪಲು ಘೋಷಿಸಿರುತ್ತದೆ. ಅದರಲ್ಲಿ ಕರ್ನಾಟಕ ರಾಜ್ಯದ ಪಾಲು 25GW ಆಗಿರುತ್ತದೆ. ಈ ನಿಟ್ಟಿನಲ್ಲಿ ಬೇಡಿಕೆಗೆ ಅನುಗುಣವಾಗಿ ಮತ್ತು RE ಪವರ್‌ನ ಯೋಜನೆಗಳನ್ನು ಜಾರಿಗೊಳಿಸಲು ಕ್ರಮವಹಿಸಲಾಗುತ್ತಿದೆ.<br><br>ಅಲ್ಲದೇ, ಪಿ.ಸಿ.ಕೆ.ಎಲ್. ಸ್ವಾಧೀನದಲ್ಲಿರುವ 551 ಎಕರೆ-13 ಗುಂಟೆ ಜಮೀನಿನಲ್ಲಿ ಕೆ.ಆರ್.ಇ.ಡಿ.ಎಲ್ ಸಂಸ್ಥೆಯು 100 ಮೆ.ವ್ಯಾ. ಸಾಮರ್ಥ್ಯದ ಸೋಲಾರ್ ಪಾರ್ಕ್ ಸ್ಥಾಪಿಸಲು ಕರ್ನಾಟಕ ಸರ್ಕಾರವು ಬಜೆಟ್ 2021-22ರಲ್ಲಿ ಅನುಮೋದನೆಯನ್ನು ನೀಡಿದ್ದು, ಸದರಿ ಯೋಜನೆಯನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಅನುಷ್ಠಾನಗೊಳಿಸಲಾಗುತ್ತಿದೆ. |
| ಈ) | ಖಾಸಗಿ ಕಂಪನಿಗಳಿಂದ ಖರೀದಿಸಲಾಗುತ್ತಿರುವ ವಾರ್ಷಿಕ ವಿದ್ಯುತ್ ಪ್ರಮಾಣವೆಷ್ಟು; ಸರ್ಕಾರವು ಈ ಕಂಪನಿಗಳಿಂದ ಪ್ರತಿ ಯೂನಿಟ್ ವಿದ್ಯುತ್ ಗೆ ಯಾವ ದರದಲ್ಲಿ ಖರೀದಿ ಮಾಡುತ್ತಿದೆ; | ರಾಜ್ಯದಲ್ಲಿ 2021-22 ರಿಂದ 2022-23 (ಡಿಸೆಂಬರ್- 2022 ರ ಅಂತ್ಯಕ್ಕೆ) ಖರೀದಿಸಿದ ವಿದ್ಯುತ್ ಪ್ರಮಾಣ ಮತ್ತು ದರದ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಉ) | ರೈತರ ಪಂಪ್ ಸೆಟ್ ಗಳಿಗೆ ಹಗಲು ಸಮಯದಲ್ಲಿ ಕನಿಷ್ಠ 6 ತಾಸು ವಿದ್ಯುತ್ ನೀಡಲು ಸರ್ಕಾರಕ್ಕಿರುವ ತೊಂದರೆಯೇನು; ಇದರ ಬಗ್ಗೆ ಸರ್ಕಾರದ ಕ್ರಮವೇನು? | ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಪ್ರಸ್ತುತ ರೈತರ ನೀರಾವರಿ ಕೃಷಿ ಪಂಪ್‌ಸೆಟ್‌ಗಳಿಗೆ ಸರ್ಕಾರದ ಆದೇಶದನ್ವಯ ದಿನವಹಿ 7 ಗಂಟೆ 3 ಫೇಸ್ ವಿದ್ಯುತ್ ಸರಬರಾಜು ಪೂರೈಸಲಾಗುತ್ತಿದೆ.<br><br>ಪ್ರಸ್ತುತ ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ತಾಂತ್ರಿಕ ಸಾಧ್ಯತೆ ಇರುವ ಪ್ರದೇಶಗಳಲ್ಲಿ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ತನ್ನು ರೈತರ ಪಂಪ್ ಸೆಟ್ಟುಗಳಿಗೆ ಸರಬರಾಜು ಮಾಡಲಾಗುತ್ತಿದೆ.<br><br>ತಾಂತ್ರಿಕ ಸಾಧ್ಯತೆ ಇಲ್ಲದಿರುವ ಕೆಲ ಪ್ರದೇಶಗಳಲ್ಲಿ ಪಾಳಿಯಲ್ಲಿ 3 ಫೇಸ್ ವಿದ್ಯುತ್ತನ್ನು ಸರಬರಾಜು ಮಾಡಲಾಗುತ್ತಿದೆ ಹಾಗೂ ಪ್ರಸರಣ ಜಾಲವನ್ನು ಬಲಪಡಿಸಲು ಕವಿಪ್ರನಿನಿ ವತಿಯಿಂದ ಹೊಸ ವಿದ್ಯುತ್ ಉಪಕೇಂದ್ರ / ಪ್ರಸರಣ ಮಾರ್ಗಗಳ ನಿರ್ಮಾಣ ಹಾಗೂ ಹಾಲಿ ವಿದ್ಯುತ್ ಉಪಕೇಂದ್ರಗಳ ಸಾಮರ್ಥ್ಯ ಹೆಚ್ಚಳಗೊಳಿಸುವಿಕೆ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ :ಎನರ್ಜಿ 26 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

## ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಮಹದೇವ ಕೆ. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:484 ಕ್ಕೆ ಅನುಬಂಧ

**2021-22 ರಿಂದ 2022-23 (ಡಿಸೆಂಬರ್- 2022ರ ಅಂತ್ಯಕ್ಕೆ) ವಿವಿಧ ವಿದ್ಯುತ್ ವಿನಿಮಯ ಕೇಂದ್ರಗಳಿಂದ ಖರೀದಿಸಿರುವ ವಿದ್ಯುತ್ತಿನ ವಿವರಗಳು ಕೆಳಕಂಡಂತಿವೆ**

| ವರ್ಷ | ವಿವರಗಳು | ವಿದ್ಯುತ್ ಪ್ರಮಾಣ (ಮಿಲಿಯನ್ ಯುನಿಟ್ ಗಳಲ್ಲಿ ) | ಸರಾಸರಿ ದರ ಪ್ರತಿಯೂನಿಟ್ ಗೆ (ರೂ.ಗಳಲ್ಲಿ) | ಮೊತ್ತ ಒಟ್ಟು ರೂ. ಕೋಟಿಗಳಲ್ಲಿ (ಓಪನ್ ಆಕ್ಸಿಸ್‌ನ್ನು ಸಹ ಒಳಗೊಂಡಿದೆ) |
|---|---|---|---|---|
| **2021-22** | ಐಇಎಕ್ಸ್ ಮತ್ತು ಪಿ.ಎಕ್ಸ್ಐ.ಎಲ್ ಮುಖಾಂತರ ಫೆಬ್ರುವರಿ ಮತ್ತು ಮಾರ್ಚ್- **2022** ರ ಮಾಹೆಯಲ್ಲಿ ಅಸಾಂಪ್ರದಾಯಕ ಮೂಲಗಳಿಂದ ವಿದ್ಯುತ್ ಖರೀದಿಸಿದ **466.13 ಮಿ.ಯೂ** ಗಳನ್ನು ಹೆಚ್ಚುವರಿ ಅಸಂಪ್ರದಾಯಕ ಮೂಲಗಳಿಂದ ವಿದ್ಯುತ್‌ನ್ನು ಬೇರೆ ಯುಟಿಲಿಟಿಯವರ ಆರ್.ಪಿ.ಓ. ಆಬ್ಲಿಗೇಷನ್ ನ್ನು ಮೀಟ್ ಮಾಡಲು ಮಾರಾಟ ಮಾಡಲಾಗಿದೆ. **36.51** ಮಿ.ಯೂ ಆಪ್ಟಿಮೈಸೇಷನ್ **(Optimization) /** ತಾತ್ಕಾಲಿಕ ವಿದ್ಯುತ್ ಕೊರತೆಯನ್ನು ಪೂರೈಸಲು ಖರೀದಿಸಲಾಗಿದೆ. | 502.64 | 4.23 | 212.53 |
| **2022-23 (ಡಿಸೆಂಬರ್- 2022 ರ ಅಂತ್ಯಕ್ಕೆ)** | ಇಂಡಿಯನ್ ಎನರ್ಜಿ ಎಕ್ಸ್‌ಚೇಂಜ್ (ಐಇಎಕ್ಸ್ ಮತ್ತು ಪಿಎಕ್ಸ್ಐಎಲ್ ಮುಖಾಂತರ) | 316.86 | 8.23 | 260.84 |

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 485 |
|---|---|
| ಸದಸ್ಯರು ಹೆಸರು | ಮಹದೇವ ಕೆ (ಪಿರಿಯಾಪಟ್ಟಣ) |
| ಉತ್ತರಿಸಬೇಕಾದ ದಿನಾಂಕ | 16.02.2023 |
| ಉತ್ತರಿಸಬೇಕಾದ ಸಚಿವರು | ಉನ್ನತ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಎಷ್ಟು ವರ್ಷದಿಂದ, ಎಷ್ಟು ಅತಿಥಿ ಉಪನ್ಯಾಸಕರುಗಳು ಸೇವೆ ಸಲ್ಲಿಸುತ್ತಿದ್ದಾರೆ; ಇವರುಗಳಿಗೆ ನೀಡುತ್ತಿರುವ ವೇತನವೆಷ್ಟು; (ವಿವರ ನೀಡುವುದು) | ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ 2003 ರಿಂದ ಅತಿಥಿ ಉಪನ್ಯಾಸಕರು ಸೇವೆ ಸಲ್ಲಿಸುತ್ತಿದ್ದಾರೆ.<br><br>ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 ಮತ್ತು ತಿದ್ದುಪಡಿ ದಿನಾಂಕ:24.01.2022 ರನ್ವಯ ಮಾಹೆಯಾನ ಗೌರವಧನವನ್ನು 2021-22ನೇ ಶೈಕ್ಷಣಿಕ ಸಾಲಿನಿಂದ ಪರಿಷ್ಕರಿಸಿ ಈ ಕೆಳಗಿನಂತೆ ನಿಗದಿಪಡಿಸಲಾಗಿದೆ;<br><br>• 5 ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿರುವವರಿಗೆ ರೂ.32,000/-.<br><br>• 5 ವರ್ಷಕ್ಕಿಂತ ಕಡಿಮೆ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿರುವವರಿಗೆ ರೂ.30,000/-.<br><br>• 5 ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದವರಿಗೆ ರೂ.28,000/-.<br><br>• 5 ವರ್ಷಕ್ಕಿಂತ ಕಡಿಮೆ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದವರಿಗೆ ರೂ.26,000/-. |
| ಆ | ಖಾಯಂ ಉಪನ್ಯಾಸಕರುಗಳೆಷ್ಟು; | ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಖಾಯಂ ಉಪನ್ಯಾಸಕರುಗಳ ಸಂಖ್ಯೆ: 5791. |

| ಇ | ವಿದ್ಯಾರ್ಹತೆ, ಅನುಭವ ಹೊಂದಿರುವ ಅತಿಥಿ ಉಪನ್ಯಾಸಕರುಗಳ ಸೇವೆಯನ್ನು ಪಡೆದುಕೊಂಡು ಸುಮಾರು 14500 ಉಪನ್ಯಾಸಕರುಗಳನ್ನು ಸೇವೆಯಿಂದ ಕೈಬಿಡಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | • ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅತಿಥಿ ಉಪನ್ಯಾಸಕರು ಸೇವಾ ಸಕ್ರಮಾತಿ, ಗೌರವಧನ ಹೆಚ್ಚಳ ಮತ್ತಿತರೆ ಬೇಡಿಕೆಗಳನ್ನು ಈಡೇರಿಸುವಂತೆ ಕೋರಿ, ದಿನಾಂಕ:10.12.2021 ರಿಂದ ಮುಷ್ಕರ ನಡೆಸಿದ್ದ ಹಿನ್ನೆಲೆಯಲ್ಲಿ ಅತಿಥಿ ಉಪನ್ಯಾಸಕರುಗಳ ಬೇಡಿಕೆಗಳಿಗೆ ಸಂಬಂಧಿಸಿದಂತೆ, ವಿವರವಾದ ಅಧ್ಯಯನ ನಡೆಸಿ, ವಿಸ್ತೃತ ವರದಿಯನ್ನು ಸಲ್ಲಿಸಲು ಸರ್ಕಾರವು ಉನ್ನತ ಮಟ್ಟದ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿತ್ತು. |
|---|---|---|
| ಈ | ಹೊಸ ಮಾನದಂಡಗಳ ಆಧಾರದ ಮೇಲೆ ಕೆಲವು ಅತಿಥಿ ಉಪನ್ಯಾಸಕರುಗಳನ್ನು ಸೇವೆಯಲ್ಲಿ ಮುಂದುವರೆಸಿದರೂ ಅವರಿಗೆ ಯಾವುದೇ ಸೇವಾ ಭದ್ರತೆ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | • ಉನ್ನತ ಮಟ್ಟದ ಅಧಿಕಾರಿಗಳ ಸಮಿತಿಯು ಅತಿಥಿ ಉಪನ್ಯಾಸಕರ ವಿವಿಧ ಬೇಡಿಕೆಗಳನ್ನು ಕಾನೂನಾತ್ಮಕವಾಗಿ, ಆಡಳಿತಾತ್ಮಕವಾಗಿ ಮತ್ತು ಆರ್ಥಿಕ ಪರಿಸ್ಥಿಗೆ ಅನುಗುಣವಾಗಿ ಪರಿಶೀಲಿಸಿ, ಸರ್ಕಾರಕ್ಕೆ ಸಲ್ಲಿಸಿದ ವರದಿಯನುಸಾರ ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 ಮತ್ತು ತಿದ್ದುಪಡಿ ದಿನಾಂಕ: 24.01.2022 ರಲ್ಲಿ ಅತಿಥಿ ಉಪನ್ಯಾಸಕರಿಗೆ ನೀಡಲಾಗುತ್ತಿದ್ದ ಗರಿಷ್ಠ 8/10 ಗಂಟೆಗಳ ಬದಲಾಗಿ, ಗರಿಷ್ಠ15/19 ಗಂಟೆಗಳ ಕಾರ್ಯಭಾರವನ್ನು ನೀಡಿ, ಗೌರವಧನವನ್ನು ಹೆಚ್ಚಿಸಲಾಗಿದೆ.<br><br>• ಮೇಲ್ಕಂಡ ಸರ್ಕಾರದ ಆದೇಶದನುಸಾರ 2021-22ನೇ ಶೈಕ್ಷಣಿಕ ಸಾಲಿನಲ್ಲಿ ಗರಿಷ್ಠ 15/19 ಗಂಟೆಗಳ ಕಾರ್ಯಭಾರ ಹಾಗೂ ಭಾಗಶಃ ಲಭ್ಯವಾಗುವ ಕಾರ್ಯಭಾರಕ್ಕೆ ಅಗತ್ಯವಿರುವ ಅತಿಥಿ ಉಪನ್ಯಾಸಕರನ್ನು ಕೇಂದ್ರಿಕೃತ ಆನ್‌ಲೈನ್ ಕೌನ್ಸಿಲಿಂಗ್ ಮೂಲಕ ರಾಜ್ಯವ್ಯಾಪಿ ಮೆರಿಟ್/ಆಯ್ಕೆಪಟ್ಟಿ ಸಿದ್ಧಪಡಿಸಿ ನೇಮಿಸಿಕೊಳ್ಳಲಾಗಿತ್ತು. ಅದರಂತೆ ಸದರಿ ಸಾಲಿನಲ್ಲಿ 9461 ಅತಿಥಿ ಉಪನ್ಯಾಸಕರು ಕರ್ತವ್ಯ ನಿರ್ವಹಿಸಿರುತ್ತಾರೆ.<br><br>• ಪ್ರಸಕ್ತ 2022-23ನೇ ಶೈಕ್ಷಣಿಕ ಸಾಲಿನಲ್ಲಿಯೂ ಸಹ ಗರಿಷ್ಠ 15/19 ಗಂಟೆಗಳ ಕಾರ್ಯಭಾರ ಹಾಗೂ ಭಾಗಶಃ ಲಭ್ಯವಾಗುವ ಕಾರ್ಯಭಾರಕ್ಕೆ ಅಗತ್ಯವಿರುವ ಅತಿಥಿ ಉಪನ್ಯಾಸಕರನ್ನು ಕೇಂದ್ರಿಕೃತ ಆನ್‌ಲೈನ್ ಕೌನ್ಸಿಲಿಂಗ್ ಮೂಲಕ ರಾಜ್ಯವ್ಯಾಪಿ ಮೆರಿಟ್/ಆಯ್ಕೆಪಟ್ಟಿ ಸಿದ್ಧಪಡಿಸಿ ನೇಮಿಸಿಕೊಳ್ಳಲು ಕ್ರಮ ವಹಿಸಲಾಗಿದ್ದು, ಅಭ್ಯರ್ಥಿಗಳು ತಮಗೆ ಬೇಕಾಗಿರುವ ಸ್ಥಳ/ಕಾಲೇಜು ಆಯ್ಕೆ ಮಾಡಿಕೊಳ್ಳಲು ಮುಕ್ತ ಅವಕಾಶ ನೀಡಲಾಗಿದೆ. ಅದರನ್ವಯ ಆನ್‌ಲೈನ್ ಕೌನ್ಸಿಲಿಂಗ್‌ನಲ್ಲಿ ಸ್ಥಳ/ಕಾಲೇಜು ಆಯ್ಕೆ ಮಾಡಿಕೊಂಡಿರುವ 9211 ಅತಿಥಿ ಉಪನ್ಯಾಸಕರು ಸಂಬಂಧಪಟ್ಟ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ಹಾಜರಾಗಿದ್ದು, ಕರ್ತವ್ಯ ನಿರ್ವಹಿಸುತ್ತಿದ್ದಾರೆ.<br><br>ಹೆಚ್ಚುವರಿ ಕಾರ್ಯಭಾರಕ್ಕೆ ಅನುಗುಣವಾಗಿ ತಾತ್ಕಾಲಿಕ ವ್ಯವಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಸೇವಾ ಭದ್ರತೆ ಒದಗಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |

| | | |
|---|---|---|
| | | ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಾಂವಿಧಾನಿಕ ಪೀಠವು ಸಿವಿಲ್ ಅಪೀಲ್ ಸಂಖ್ಯೆ: 3595-3612/1999, ಉಮಾದೇವಿ ವಿರುದ್ಧ ಕರ್ನಾಟಕ ಸರ್ಕಾರ ಮತ್ತು ಇತರರು ಪ್ರಕರಣದಲ್ಲಿ ದಿನಾಂಕ:10-04-2006 ರಂದು ನೀಡಿರುವ ತೀರ್ಪಿನಲ್ಲಿ ನೇಮಕಾತಿ ನಿಯಮಗಳಂತೆ ನೇಮಕಾತಿ ಆಗದಿರುವ ವ್ಯಕ್ತಿಗಳಿಗೆ ಸಕ್ರಮಾತಿಯ ಹಕ್ಕು ದೊರೆಯುವುದಿಲ್ಲವೆಂದು ಹಾಗೂ ಇಂತಹ ನಿಯಮಬಾಹಿರ ನೇಮಕಾತಿಯನ್ನು ಸಕ್ರಮಾತಿಗೊಳಿಸಬಾರದೆಂದು ಆದೇಶಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ, ತಾತ್ಕಾಲಿಕ ವ್ಯವಸ್ಥೆಯಡಿ ಕಾರ್ಯನಿರ್ವಹಿಸಿರುವ ಅತಿಥಿ ಉಪನ್ಯಾಸಕರ ಸೇವೆಯನ್ನು ಸಕ್ರಮಾತಿಗೊಳಿಸಿದ್ದಲ್ಲಿ, ಅದು Perpetuate an illegality in the matter of public employment ಆಗುವುದರಿಂದ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಉಮಾದೇವಿ ಪ್ರಕರಣದಲ್ಲಿ ವ್ಯಕ್ತಪಡಿಸಿರುವ ನಿಲುವಿಗೆ ವಿರುದ್ಧವಾಗುತ್ತದೆ.<br><br>ಅಲ್ಲದೆ, ಅತಿಥಿ ಉಪನ್ಯಾಸಕರ ಸೇವೆಯನ್ನು ಸಕ್ರಮಾತಿಗೊಳಿಸುವಂತೆ ಕೋರಿ ಮಾನ್ಯ ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ:4625-4640/2012(ಶ್ರೀ ವೀರಣ್ಣ ಎಸ್. ಸಜ್ಜನರ್ ಮತ್ತು ಇತರರು), ಅರ್ಜಿ ಸಂಖ್ಯೆ:2526-2532/2014(ಶ್ರೀ ಕೆ.ಆರ್.ವಿಶ್ವಕುಮಾರ್ & ಇತರರು), ಅರ್ಜಿ ಸಂಖ್ಯೆ:1579-1585/2017(ಶ್ರೀ ಜಯಚಂದ್ರ ಕೆ.ಇ. & ಇತರರು) ಮತ್ತು ಇತ್ತೀಚಿನ ಅರ್ಜಿ ಸಂಖ್ಯೆ:823-839/2020 (ಶ್ರೀ ಸಕಲೇಶ್ ಹೆಚ್.ಜಿ & ಇತರರು) ಗಳಿಗೆ ಮಾನ್ಯ ನ್ಯಾಯಮಂಡಳಿಯು ನೀಡಿದ ತೀರ್ಪಿನಲ್ಲಿ 'ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ತಾತ್ಕಾಲಿಕ ನೌಕರರನ್ನು ಅವರ ಸೇವಾವಧಿಯನ್ನು ಆಧರಿಸಿ ಸೇವಾ ಸಕ್ರಮಾತಿಗೆ ಪರಿಗಣಿಸಲು ಅರ್ಹರಾಗಿರುವುದಿಲ್ಲವೆಂದು, ಅದೇ ರೀತಿ, ನೇಮಕಾತಿ ನಿಯಮಗಳಂತೆ ನೇಮಕಾತಿ ಆಗದಿರುವ ವ್ಯಕ್ತಿಗಳಿಗೆ ಸಕ್ರಮಾತಿಯ ಹಕ್ಕು ದೊರೆಯುವುದಿಲ್ಲವೆಂದು ಹಾಗೂ ಇಂತಹ ನಿಯಮಬಾಹಿರ ನೇಮಕಾತಿಯನ್ನು ಸಕ್ರಮಾತಿಗೊಳಿಸಬಾರದೆಂದು' ತಿಳಿಸಿರುವ ನಿಲುವನ್ನು ಆಧರಿಸಿ ಸದರಿ ಅರ್ಜಿಗಳನ್ನು ವಜಾಗೊಳಿಸಿರುತ್ತದೆ.<br><br>ಸರ್ಕಾರದ ಸುತ್ತೋಲೆ ಸಂಖ್ಯೆ:ಇಡಿ/55/ಡಿಸಿಇ/2005, ದಿನಾಂಕ:25.08.2012 ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಕಾಲೇಜುಗಳಲ್ಲಿ 1994-95 ರ ನಂತರ ಅರೆಕಾಲಿಕ ಉಪನ್ಯಾಸಕರಾಗಿ ಮತ್ತು 2004-05 ರ ನಂತರ ಅತಿಥಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವರನ್ನು ಯಾವುದೇ ಕಾರಣಕ್ಕೂ ಸಕ್ರಮಗೊಳಿಸಲಾಗುವುದಿಲ್ಲ. ಅದು ಕಾನೂನು ವಿರುದ್ಧವಾದದ್ದು ಹಾಗೂ ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾದದ್ದು, ಆದುದರಿಂದ, ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ/ಮುಂದೆ ಉದ್ಭವಿಸಬಹುದಾದ ಉಪನ್ಯಾಸಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕವೇ ತುಂಬಬೇಕಾಗುತ್ತದೆ ಎಂಬುದಾಗಿ ಸ್ಪಷ್ಟವಾಗಿ ತಿಳಿಸಲಾಗಿರುತ್ತದೆ.<br><br>ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ, ನೇಮಕಾತಿ ನಿಯಮಗಳಂತೆ ನೇಮಕಾತಿ ಆಗದಿರುವ ಹಾಗೂ ತಾತ್ಕಾಲಿಕ ವ್ಯವಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರ ತಾತ್ಕಾಲಿಕ ಸೇವೆಯನ್ನು ಪರಿಗಣಿಸಿ, ಸೇವಾ |

| | | |
|---|---|---|
| | | ಭದ್ರತೆ / ವಿಲೀನಗೊಳಿಸಲು ಅವಕಾಶ ಇರುವುದಿಲ್ಲ. |
| ಉ | ಇವರ ಸೇವಾ ಭದ್ರತೆಗೆ ಸಂಬಂಧಿಸಿದಂತೆ, ಕಲಬುರಗಿ ಹಾಗೂ ಧಾರವಾಡ ಪೀಠಗಳ ಘನ ಉಚ್ಛನ್ಯಾಯಾಲಯಗಳು ತೀರ್ಪು ನೀಡಿವೆಯೇ; (ವಿವರ ನೀಡುವುದು) | ಅತಿಥಿ ಉಪನ್ಯಾಸಕರ ಸೇವಾ ಸಕ್ರಮಾತಿ ಕೋರಿಕೆ ಸಂಬಂಧ; ಕಲಬುರಗಿ ಪೀಠದ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಬಟ್ ಅರ್ಜಿ ಸಂಖ್ಯೆ: 226108/2020 ದಾಖಲಾಗಿದ್ದು, ಸದರಿ ಅರ್ಜಿಗೆ ಮಾನ್ಯ ನ್ಯಾಯಾಲಯವು ದಿನಾಂಕ:09-09-2020 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ.<br><br>*" In the above circumstances, this writ petition is succeeds in part; a writ of mandamus issues to the respondents to consider the case of petitioners for regularization/absorption within the parameters of aforesaid judgment of the Co-ordinate Bench and in accordance with law, preferably within an outer limit of three months; the respondents are directed not to discontinue the services of the petitioners, and not to alter their service conditions prejudicially till after such consideration takes place.*<br><br>*It is open to the answering respondents to solicit any information or documents from the side of the petitioners as are necessary for such consideration, however subject to the rider that in the guise of solicitation, no delay shall be brooked".*<br>ಧಾರವಾಡ ಪೀಠದ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 116156/2019 ಮತ್ತು 116899-920/2019 ಗಳು ದಾಖಲಾಗಿದ್ದು, ಸದರಿ ಅರ್ಜಿಗೆ ಮಾನ್ಯ ನ್ಯಾಯಾಲಯವು ದಿನಾಂಕ:24-11-2020 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ.<br><br>*In the above circumstances, this writ petition is succeeds in part; a writ of mandamus issues to the respondents to consider the case of petitioners for regularization/absorption within the parameters of aforesaid judgment of the Co-ordinate Bench and in accordance with law, preferably within an outer limit of three months; the respondents are directed not to discontinue the services of the petitioners, and not to alter their service conditions prejudicially till after such consideration takes place.It is open to the answering respondents to solicit any information or documents from the side of the petitioners as are necessary for such consideration, however subject to the rider that in the guise of solicitation, no delay shall be **brooked**".*<br><br>ಮೇಲಿನ ರಿಟ್ ಅರ್ಜಿಗಳಲ್ಲಿ ಮಾನ್ಯ ನ್ಯಾಯಾಲಯಗಳು ನೀಡಿರುವ ತೀರ್ಪಿನನ್ವಯ ಪರಿಶೀಲಿಸಲಾಗಿ, ಉಮಾದೇವಿ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯವು ವ್ಯಕ್ತಪಡಿಸಿರುವ ನಿಲುವಿನ ಹಿನ್ನೆಲೆಯಲ್ಲಿ ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ ಎಂಬುದಾಗಿ ದಿನಾಂಕ:09.02.2021 ರಲ್ಲಿ ಹಿಂಬರಹ ನೀಡಲಾಗಿದೆ. |

| ಊ | ಇವರ ಸೇವೆಯನ್ನು 60ನೇ ವಯಸ್ಸಿನವರೆಗೂ ಸೇವಾ ಭದ್ರತೆ ನೀಡುವ ಬಗ್ಗೆ ಸರ್ಕಾರದ ಕ್ರಮವೇನು? | ಹೆಚ್ಚುವರಿ/ಉಳಿಕೆ ಕಾರ್ಯಭಾರಕ್ಕನುಗುಣವಾಗಿ ತಾತ್ಕಾಲಿಕ ವ್ಯವಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರನ್ನು ಅವರು 60 ವರ್ಷ ವಯಸ್ಸಿನವರೆಗೆ ಮುಂದುವರೆಸಿ, ಸೇವಾ ಭದ್ರತೆ ನೀಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |
|---|---|---|

**ಇಡಿ 56 ಡಿಸಿಇ 2023**

**(ಡಾ. ಅಶ್ವಥ್ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ವಿದ್ಯುನ್ಮಾನ, ಐಟಿ-ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 486 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 16-02-2023 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಖಾಸಗಿ ಮತ್ತು ಸರ್ಕಾರಿ ವಿಶ್ವವಿದ್ಯಾಲಯಗಳೆಷ್ಟು; ಯಾವುವು; (ವಿವರ ನೀಡುವುದು) | ರಾಜ್ಯ ಶಾಸನಗಳ ಮೂಲಕ ಸ್ಥಾಪಿತಗೊಂಡು ರಾಜ್ಯದಲ್ಲಿ ಒಟ್ಟು 24 ಖಾಸಗಿ ವಿಶ್ವವಿದ್ಯಾಲಯಗಳು ಕಾರ್ಯನಿರ್ವಹಿಸುತ್ತಿದ್ದು, ಅವುಗಳ ಹೆಸರು ಮತ್ತು ಸ್ಥಾಪನೆಗೊಂಡ ವಿವರಗಳನ್ನು **ಅನುಬಂಧ-01ರಲ್ಲಿ** ನೀಡಲಾಗಿದೆ.<br>ಮುಂದುವರೆದು, ರಾಜ್ಯ ಶಾಸನಗಳ ಮೂಲಕ ಸ್ಥಾಪಿತಗೊಂಡು ರಾಜ್ಯದಲ್ಲಿ ಒಟ್ಟು 25 ಸಾರ್ವಜನಿಕ ವಿಶ್ವವಿದ್ಯಾಲಯಗಳು ಕಾರ್ಯನಿರ್ವಹಿಸುತ್ತಿದ್ದು, ಅವುಗಳ ಹೆಸರು ಮತ್ತು ಸ್ಥಾಪನೆಗೊಂಡ ವಿವರಗಳನ್ನು **ಅನುಬಂಧ-02ರಲ್ಲಿ** ನೀಡಲಾಗಿದೆ. |
| ಆ) | ಸರ್ಕಾರ ಸ್ಥಾಪನೆ ಮಾಡಿರುವ ವಿಶ್ವವಿದ್ಯಾಲಯಗಳಿಗೆ ಕೇಂದ್ರ ಸರ್ಕಾರದ ಯುಜಿಸಿ ಅನುದಾನ ಹಾಗೂ ರಾಜ್ಯ ಸರ್ಕಾರದ ಅನುದಾನವು ಸೇರಿ ವಾರ್ಷಿಕವಾಗಿ ಎಷ್ಟು ಖರ್ಚಾಗುತ್ತದೆ; | ರಾಜ್ಯ ಸರ್ಕಾರವು ಸ್ಥಾಪನೆ ಮಾಡಿರುವ ಹಳೆಯ ವಿಶ್ವವಿದ್ಯಾಲಯಗಳಿಗೆ ವೇತನ, ವಿಶ್ರಾಂತಿ ವೇತನದ ಅನುದಾನವನ್ನು ರಾಜ್ಯ ಸರ್ಕಾರವು ಆಯಾ ವಿಶ್ವವಿದ್ಯಾಲಯಗಳಿಗೆ ಆಯವ್ಯಯದಲ್ಲಿ ನಿಗದಿಪಡಿಸಿದಂತೆ ನಿಯಮಾನುಸಾರ ಬಿಡುಗಡೆ ಮಾಡಿ ವೆಚ್ಚ ಭರಿಸಲಾಗುತ್ತಿದೆ.<br>ಹೊಸ ವಿಶ್ವವಿದ್ಯಾಲಯಗಳಿಗೆ ವೇತನಾನುದಾನದ ಜೊತೆಗೆ ಆಯವ್ಯಯದಲ್ಲಿ ನಿಗದಿಪಡಿಸಿದ ಅಭಿವೃದ್ಧಿ ಅನುದಾನವನ್ನು ಸಹ ಬಿಡುಗಡೆ ಮಾಡಲಾಗುತ್ತಿದೆ. ವಿವರಗಳನ್ನು **ಅನುಬಂಧ-3 ರಲ್ಲಿ** ನೀಡಲಾಗಿದೆ. |
| ಇ) | ಸಾಮಾನ್ಯ ಶಿಕ್ಷಣಕ್ಕೆ, ವಿಜ್ಞಾನಕ್ಕೆ, ತಂತ್ರಜ್ಞಾನಕ್ಕೆ, ಕಾನೂನು, ವೈದ್ಯಕೀಯ, ಕೃಷಿ ಹಾಗೂ ಪಶು ವೈದ್ಯಕೀಯ ವಿಶ್ವವಿದ್ಯಾಲಯಗಳು ಬಿಟ್ಟು ಬೇರೆ ಬೇರೆ ಹೆಸರಿನಲ್ಲಿ ಸ್ಥಾಪನೆ ಮಾಡಿರುವ ವಿಶ್ವವಿದ್ಯಾಲಯಗಳಿಂದ ಯಾವ ರೀತಿ ಸಮಾಜಕ್ಕೆ ಹಾಗೂ | ಸಾಮಾನ್ಯ ಶಿಕ್ಷಣಕ್ಕೆ, ವಿಜ್ಞಾನಕ್ಕೆ, ತಂತ್ರಜ್ಞಾನಕ್ಕೆ, ಕಾನೂನು, ವೈದ್ಯಕೀಯ, ಕೃಷಿ ಹಾಗೂ ಪಶುವೈದ್ಯಕೀಯ ವಿಶ್ವವಿದ್ಯಾಲಯಗಳು ಬಿಟ್ಟು ಬೇರೆ ಹೆಸರಿನಲ್ಲಿ ಸ್ಥಾಪನೆ ಮಾಡಿರುವ ವಿಶ್ವವಿದ್ಯಾಲಯಗಳ ವಿವರ ಹಾಗೂ ಅವುಗಳ ಉದ್ದೇಶದ ವಿವರಗಳು ಈ ಕೆಳಕಂಡಂತಿರುತ್ತವೆ.<br><br>1. ಕರ್ನಾಟಕ ಜಾನಪದ ವಿಶ್ವವಿದ್ಯಾಲಯ- ವಿಶೇಷವಾಗಿ |

| | | |
|---|---|---|
| | ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ; | ಜಾನಪದ ಸಂಸ್ಕೃತಿಯಲ್ಲಿ ಶ್ರೀಮಂತವಾಗಿರುವ ಕರ್ನಾಟಕ ಬುಡಕಟ್ಟು ಜನರ ಜಾನಪದ ಸಂಸ್ಕೃತಿಯನ್ನು ಸಂರಕ್ಷಿಸುವುದಕ್ಕೆ ಮತ್ತು ಜಾನಪದ ಕ್ಷೇತ್ರದಲ್ಲಿ ಉನ್ನತ ಶಿಕ್ಷಣ ಮತ್ತು ಸಂಶೋಧನೆಗೆ ಅವಕಾಶ ಕಲ್ಪಿಸುವುದಕ್ಕಾಗಿ, ಗ್ರಾಮೀಣ ಸಂಸ್ಕೃತಿಯ ಸಹಕಾರ ಮತ್ತು ಉತ್ತಮ ತಿಳುವಳಿಕೆಯನ್ನು ಮೂಡಿಸುವುದಕ್ಕೆ ಮತ್ತು ಈವರೆಗೆ ಅಲಕ್ಷ್ಯಕ್ಕೆ ಒಳಗಾಗಿದ್ದ ಜಾನಪದ ಮತ್ತು ವೃತ್ತಿ ಕೌಶಲ್ಯಗಳನ್ನು ಘೋಷಿಸುವುದಕ್ಕಾಗಿ ಹಾಗೂ ಭಾರತದಲ್ಲಿನ ಇತರ ರಾಜ್ಯಗಳಲ್ಲಿಯ ಮತ್ತು ವಿದೇಶದಲ್ಲಿಯ ವಿವಿಧ ಜಾನಪದ ಸಂಸ್ಕೃತಿಯ ತೌಲನಿಕ ಅಧ್ಯಯನದ ಉದ್ದೇಶಕ್ಕಾಗಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಅಧಿನಿಯಮ 2011 ನ್ನು ಜಾರಿಗೆ ತರುವುದರ ಮೂಲಕ ಕರ್ನಾಟಕ ಜಾನಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ.<br>2. ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ – ಸಂಗೀತ ಮತ್ತು ಪ್ರದರ್ಶಕ ಕಲೆಗಳ ಎಲ್ಲಾ ಶಾಖೆಗಳಲ್ಲಿ ಕಲಿಕೆಯ ಮುನ್ನಡೆಯನ್ನು ಸಾಧಿಸುವುದು, ಸಂಶೋಧನೆ ನಡೆಸುವುದು, ದಾಖಲೀಕರಣ, ಧ್ವನಿ ಮತ್ತು ದೃಶ್ಯ ರೆಕಾರ್ಡಿಂಗ್ ಗಳನ್ನು ಪ್ರಕಟಿಸುವ ಮತ್ತು ಜನಪ್ರಿಯಗೊಳಿಸುವ ಉದ್ದೇಶಕ್ಕಾಗಿ ಹಾಗೂ ಇಲ್ಲಿ ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಅದಕ್ಕೆಂದೇ ಅನನ್ಯವಾಗಿ ನಿರತವಾದ ಒಂದು ಏಕ ಘಟಕೀಯ ಮತ್ತು ನಿವಾಸಿ ಸ್ವರೂಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದು ಯುಕ್ತವಾದುದರಿಂದ, ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ ಅಧಿನಿಯಮ 2009 ನ್ನು ಜಾರಿಗೆ ತರುವುದರ ಮೂಲಕ ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ.<br>3. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ – ಸಂಸ್ಕೃತ ಭಾಷೆಯು ಅತ್ಯಂತ ಶ್ರೀಮಂತ ಭಾಷೆಯಾಗಿರುವುದರಿಂದ ಮತ್ತು ಮೂಲಾಧಾರವಾಗಿರುವುದರಿಂದ, ಸಂಸ್ಕೃತ ಭಾಷೆಯಲ್ಲಿ ಮತ್ತು ಸಂಸ್ಕೃತ ಭಾಷೆಗೆ ಸಂಬಂಧಿಸಿದ ಕ್ಷೇತ್ರಗಳು ಮತ್ತು ವಿದ್ಯಾವಿಷಯಗಳಲ್ಲಿ ಸಂಶೋಧನೆಗೆ ಉತ್ತೇಜನ ನೀಡುವುದು, ಕರ್ನಾಟಕದಲ್ಲಿ ಈಗಿರುವ ಸಂಸ್ಕೃತ ಸಂಸ್ಥೆಗಳಲ್ಲಿ |
| ಈ) | ಇವುಗಳಿಂದ ಸರ್ಕಾರಕ್ಕೆ ಹೊರೆಯಾಗುವುದಿಲ್ಲವೇ; | |
| ಉ) | ಅದುದರಿಂದ ಬೇರೆ ವಿಶ್ವವಿದ್ಯಾಲಯಗಳನ್ನು ಸಾಮಾನ್ಯ ಶಿಕ್ಷಣ ವಿಶ್ವವಿದ್ಯಾಲಯಗಳ ಜೊತೆ ವಿಲೀನ ಮಾಡಿ ಅನಗತ್ಯ ಖರ್ಚು, ಅನಗತ್ಯ ಹುದ್ದೆಗಳಿಗೆ ಕಡಿವಾಣ ಹಾಕುವ ಬಗ್ಗೆ ಸರ್ಕಾರದ ನಿಲುವೇನು? | |

| | | ನಡೆಯುವ ಸಂಸ್ಕೃತ ಅಧ್ಯಯನವನ್ನು ವ್ಯವಸ್ಥಿತಗೊಳಿಸುವುದು, ಉಭಯ ಭಾಷೆಗಳನ್ನು ಸಮೃದ್ಧಗೊಳಿಸುವುದಕ್ಕಾಗಿ ಸಂಸ್ಕೃತ ಮತ್ತು ಕನ್ನಡದ ನಡುವೆ ಇರುವ ಸುಸಂಬದ್ಧವನ್ನು ಬಳಸಿಕೊಳ್ಳುವುದು, ಸಂಸ್ಕೃತ ಭಾಷಾ ವಿದ್ವಾಂಸರು ಹಾಗೂ ತತ್ಸಂಧಿತ ವಿದ್ಯಾವಿಷಯಗಳ ವಿದ್ವಾಂಸರುಗಳ ನಡುವೆ ವಿಚಾರ ಹಾಗೂ ಪಾಂಡಿತ್ಯ ವಿನಿಯಮಕ್ಕೆ ಒಂದು ಸಾಮಾನ್ಯ ವೇದಿಕೆ ಒದಗಿಸಿಕೊಡುವುದಕ್ಕೆ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಅಧಿನಿಯಮ 2009 ನ್ನು ಜಾರಿಗೊಳಿಸುವ ಮೂಲಕ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ.<br>4. ಕನ್ನಡ ವಿಶ್ವವಿದ್ಯಾಲಯ- ಪ್ರಾಚೀನವಾದ ಮತ್ತು ಉಜ್ವಲವಾದ ಸಾಹಿತ್ಯ ಹಾಗೂ ಸಾಂಸ್ಥಿಕ ಸಂಪ್ರದಾಯ ಮತ್ತು ಪರಂಪರೆಯನ್ನು ಹೊಂದಿರುವ ಕನ್ನಡ ಭಾಷೆ, ಸಾಹಿತ್ಯ ಮತ್ತು ಅಂಥ ಕ್ಷೇತ್ರಗಳಲ್ಲಿ ಮುನ್ನಡೆಯನ್ನು ಸಾಧಿಸಲು ಮತ್ತು ಸಂಶೋಧನೆ ನಡೆಸಲು ಒಂದು ಪ್ರತ್ಯೇಕ ವಿಶ್ವವಿದ್ಯಾಲಯದ ಅಗತ್ಯತೆಯನ್ನು ಪರಿಗಣಿಸಿ ಕನ್ನಡ ವಿಶ್ವವಿದ್ಯಾಲಯ ಅಧಿನಿಯಮ, 1991ನ್ನು ಜಾರಿಗೊಳಿಸುವ ಮೂಲಕ ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ.<br><br>ಈ ಮೇಲಿನ ವಿಶ್ವವಿದ್ಯಾಲಯಗಳನ್ನು ಕರ್ನಾಟಕ ರಾಜ್ಯದ ಜಾನಪದ ಮತ್ತು ಸಾಂಸ್ಕೃತಿಕ, ಪ್ರಾಚೀನ ಭಾಷಾ ಸಂಸ್ಕೃತಿ, ಕಲೆ ಮತ್ತು ಕನ್ನಡ ಭಾಷೆ, ಸಾಹಿತ್ಯ ಮತ್ತು ಸಾಂಸ್ಥಿಕ ಸಂಪ್ರದಾಯಗಳ ಪರಂಪರೆಯನ್ನು ಮುನ್ನಡೆಸಲು ಮತ್ತು ಸಂಶೋಧನೆಗಳನ್ನು ನಡೆಸುವ ಉದ್ದೇಶದಿಂದ ಬೇರೆ ವಿಶ್ವವಿದ್ಯಾಲಯಗಳಿಂದ ಪ್ರತ್ಯೇಕವಾಗಿ ಸ್ಥಾಪಿಸಲಾಗಿದೆ.<br><br>ಪ್ರಸ್ತುತ ಒದಗಿಸಲಾಗುತ್ತಿರುವ ಆರ್ಥಿಕ ಸಹಾಯಾನುದಾನದ ಹೊರತಾಗಿ ಹೆಚ್ಚುವರಿ ಹಣಕಾಸಿನ ಹೊರೆಯಾಗದಂತೆ ನಿಭಾಯಿಸಲಾಗುತ್ತಿದೆ. |
|---|---|---|

**ಸಂಖ್ಯೆ: ಇಡಿ/88/ಯುಆರ್‌ಸಿ/2023**

**(ಡಾ|| ಅಶ್ವಥ್‌ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ಐಟಿ -ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಜೀವನೋಪಾಯ ಹಾಗೂ ಉದ್ಯಮಶೀಲತೆ
ಇಲಾಖೆ ಸಚಿವರು

ಅನುಬಂಧ-01

| ಕ್ರ.ಸಂ | ಖಾಸಗಿ ವಿಶ್ವವಿದ್ಯಾಲಯಗಳ ಹೆಸರು | ಸ್ಥಾಪನೆಯಾದ ವರ್ಷ |
|---|---|---|
| 1 | ಅಲಿಯನ್ಸ್ ವಿಶ್ವವಿದ್ಯಾಲಯ, ಬೆಂಗಳೂರು. | 2010 |
| 2 | ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ, ಬೆಂಗಳೂರು. | 2010 |
| 3 | ಸಿ.ಎಂ.ಆರ್. ವಿಶ್ವವಿದ್ಯಾಲಯ, ಬೆಂಗಳೂರು. | 2013 |
| 4 | ಪಿ.ಇ.ಎಸ್. ವಿಶ್ವವಿದ್ಯಾಲಯ, ಬೆಂಗಳೂರು. | 2013 |
| 5 | ಎಂ.ಎಸ್. ರಾಮಯ್ಯ ಅನ್ವಯಿಕ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು. | 2013 |
| 6 | ರೇವಾ ವಿಶ್ವವಿದ್ಯಾಲಯ, ಬೆಂಗಳೂರು. | 2013 |
| 7 | ದಯಾನಂದ ಸಾಗರ ವಿಶ್ವವಿದ್ಯಾಲಯ, ಬೆಂಗಳೂರು. | 2014 |
| 8 | ಪ್ರೆಸಿಡೆನ್ಸಿ ವಿಶ್ವವಿದ್ಯಾಲಯ, ಬೆಂಗಳೂರು. | 2014 |
| 9 | ರೈ ತಾಂತ್ರಿಕ ವಿಶ್ವವಿದ್ಯಾಲಯ, ಬೆಂಗಳೂರು. | 2014 |
| 10 | ಕೆ.ಎಲ್.ಇ. ತಾಂತ್ರಿಕ ವಿಶ್ವವಿದ್ಯಾಲಯ, ಹುಬ್ಬಳ್ಳಿ. | 2015 |
| 11 | ಜೆ.ಎಸ್.ಎಸ್. ತಾಂತ್ರಿಕ ವಿಶ್ವವಿದ್ಯಾಲಯ, ಮೈಸೂರು. | 2016 |
| 12 | ಗಾರ್ಡನ್ ಸಿಟಿ ವಿಶ್ವವಿದ್ಯಾಲಯ, ಬೆಂಗಳೂರು. | 2016 |
| 13 | ಶ್ರೀನಿವಾಸ ವಿಶ್ವವಿದ್ಯಾಲಯ, ಮಂಗಳೂರು. | 2017 |
| 14 | ಶರಣಬಸವ ವಿಶ್ವವಿದ್ಯಾಲಯ, ಕಲಬುರಗಿ. | 2017 |
| 15 | ಆದಿಚುಂಚನಗಿರಿ ವಿಶ್ವವಿದ್ಯಾಲಯ, ನಾಗಮಂಗಲ. | 2018 |
| 16 | ಖಾಜಾ ಬಂದಾನವಾಜ್ ವಿಶ್ವವಿದ್ಯಾಲಯ, ಕಲಬುರಗಿ. | 2018 |
| 17 | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ವಿಶ್ವವಿದ್ಯಾಲಯ, ಧಾರವಾಡ. | 2018 |
| 18 | ಶ್ರೀ ಸತ್ಯಸಾಯಿ ಮಾನವ ಅಭ್ಯುದಯ ವಿಶ್ವವಿದ್ಯಾಲಯ, ಕಲಬುರಗಿ. | 2019 |
| 19 | ಎನ್.ಐ.ಇ. ವಿಶ್ವವಿದ್ಯಾಲಯ, ಮೈಸೂರು. (ವಿಶ್ವವಿದ್ಯಾಲಯದ ಸ್ಥಾಪನೆಗೆ ಅಧಿಸೂಚನೆ ಹೊರಡಿಸಲಾಗಿದ್ದು, ಇನ್ನೂ ಕಾರ್ಯಾರಂಭ ಮಾಡಿರುವುದಿಲ್ಲ). | 2019 |
| 20 | ಆರ್.ವಿ. ವಿಶ್ವವಿದ್ಯಾಲಯ, ಬೆಂಗಳೂರು. | 2021 |
| 21 | ಏಟ್ರಿಯಾ ವಿಶ್ವವಿದ್ಯಾಲಯ, ಬೆಂಗಳೂರು.. | 2022 |
| 22 | ಚಾಣಕ್ಯ ವಿಶ್ವವಿದ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | 2022 |
| 23 | ಶ್ರೀ ಜಗದ್ಗುರು ಮುರುಘರಾಜೇಂದ್ರ ವಿಶ್ವವಿದ್ಯಾಲಯ, ಚಿತ್ರದುರ್ಗ. (ವಿಶ್ವವಿದ್ಯಾಲಯದ ಸ್ಥಾಪನೆಗೆ ಅಧಿಸೂಚನೆ ಹೊರಡಿಸಲಾಗಿದ್ದು, ಇನ್ನೂ ಕಾರ್ಯಾರಂಭ ಮಾಡಿರುವುದಿಲ್ಲ). | 2022 |
| 24 | ವಿದ್ಯಾಶಿಲ್ಪ್ ವಿಶ್ವವಿದ್ಯಾಲಯ, ಬೆಂಗಳೂರು. | 2022 |

*******

ಅನುಬಂಧ-02

| ಕ್ರ.ಸಂ. | ಸಾರ್ವಜನಿಕ ವಿಶ್ವವಿದ್ಯಾಲಯಗಳ ಹೆಸರು | ಸ್ಥಾಪನೆಯಾದ ವರ್ಷ |
|---|---|---|
| 1 | ಮೈಸೂರು ವಿಶ್ವವಿದ್ಯಾಲಯ, ಮೈಸೂರು. | 1916 |
| 2 | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, | 1949 |
| 3 | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. | 1964 |
| 4 | ಗುಲ್ಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ. | 1980 |
| 5 | ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು. | 1980 |
| 6 | ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ. | 1987 |
| 7 | ಕನ್ನಡ ವಿಶ್ವವಿದ್ಯಾಲಯ, ಹಂಪಿ. | 1991 |
| 8 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು. | 1996 |
| 9 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ. | 1994 |
| 10 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ. | 2003 |
| 11 | ತುಮಕೂರು ವಿಶ್ವವಿದ್ಯಾಲಯ, ತುಮಕೂರು. | 2004 |
| 12 | ಡಾ. ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶನ ಕಲೆಗಳ ವಿಶ್ವವಿದ್ಯಾಲಯ, ಮೈಸೂರು. | 2009 |
| 13 | ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ. | 2009 |
| 14 | ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ. | 2010 |
| 15 | ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ. | 2010 |
| 16 | ಕರ್ನಾಟಕ ರಾಜ್ಯ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು. | 2010 |
| 17 | ಕರ್ನಾಟಕ ರಾಜ್ಯ ಜಾನಪದ ವಿಶ್ವವಿದ್ಯಾಲಯ, ಶಿಗ್ಗಾವಿ, ಹಾವೇರಿ ಜಿಲ್ಲೆ. | 2012 |
| 18 | ಬೆಂಗಳೂರು ನಗರ ವಿಶ್ವವಿದ್ಯಾಲಯ, ಬೆಂಗಳೂರು. | 2015 |
| 19 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ, ಟಮಕ, ಕೋಲಾರ. | 2015 |
| 20 | ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯ, ಬೆಂಗಳೂರು. | 2019 |
| 21 | ಮಂಡ್ಯ ವಿಶ್ವವಿದ್ಯಾಲಯ, ಮಂಡ್ಯ | 2019 |
| 22 | ಬೆಂಗಳೂರು ಡಾ. ಬಿ.ಆರ್. ಅಂಬೇಡ್ಕರ್ ಅರ್ಥಶಾಸ್ತ್ರ ವಿದ್ಯಾಲಯ ವಿಶ್ವವಿದ್ಯಾಲಯ, ಬೆಂಗಳೂರು. | 2019 |
| 23 | ನೃಪತುಂಗ ವಿಶ್ವವಿದ್ಯಾಲಯ, ಬೆಂಗಳೂರು. | 2020 |
| 24 | ರಾಯಚೂರು ವಿಶ್ವವಿದ್ಯಾಲಯ, ರಾಯಚೂರು. | 2020 |
| 25 | ವಿಶ್ವವಿದ್ಯಾಲಯ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜು. | 2022 |

******

# ಅನುಬಂಧ- ೦೩

ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯಗಳಿಗೆ 2021-22 ಮತ್ತು 2022-23ರಲ್ಲಿನ ಆಯವ್ಯಯ ಹಂಚಿಕೆ.

(ರೂ. ಲಕ್ಷಗಳಲ್ಲಿ

| ಕ್ರ. ಸಂ | ವಿಶ್ವವಿದ್ಯಾಲಯಗಳ ಹೆಸರು ಮತ್ತು ಲೆಕ್ಕ ಶೀರ್ಷಿಕೆ | ಉಪ ಲೆಕ್ಕ ಶೀರ್ಷಿಕೆ | 2021-22ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ | 2022-23ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ |
|---|---|---|---|---|
| 1 | ಮೈಸೂರು ವಿಶ್ವವಿದ್ಯಾಲಯ 2202-03-102-0-01 | 101-ಸಹಾಯಾನುದಾನ-ವೇತನಗಳು | 10859.00 | 12175.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 4416.00 | 5000.00 |
| 2 | ಕನಾಟಕ ವಿಶ್ವವಿದ್ಯಾಲಯ 2202-03-102-0-02 | 101-ಸಹಾಯಾನುದಾನ-ವೇತನಗಳು | 8258.00 | 9471.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 4500.00 | 8625.00 |
| 3 | ಬೆಂಗಳೂರು ವಿಶ್ವವಿದ್ಯಾಲಯ 2202-03-102-0-03 | 101-ಸಹಾಯಾನುದಾನ-ವೇತನಗಳು | 13401.00 | 10373.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 1523.00 | 1500.00 |
| 4 | ಗುಲ್ಬರ್ಗಾ ವಿಶ್ವವಿದ್ಯಾಲಯ 2202-03-102-0-04 | 101-ಸಹಾಯಾನುದಾನ-ವೇತನಗಳು | 3064.00 | 3433.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 1500.00 | 2000.00 |
| 5 | ಮಂಗಳೂರು ವಿಶ್ವವಿದ್ಯಾಲಯ 2202-03-102-0-05 | 101-ಸಹಾಯಾನುದಾನ-ವೇತನಗಳು | 5261.00 | 5924.00 |
| | | 103-ಸಹಾಯಾನುದಾನ-ಸಾಮಾನ್ಯ | 00.00 | 200.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 574.00 | 2561.00 |
| 6 | ಕನ್ನಡ ವಿಶ್ವವಿದ್ಯಾಲಯ 2202-03-102-0-06 | 101 ಸಹಾಯಾನುದಾನ-ವೇತನಗಳು | 2474.00 | 2702.00 |
| | | 103-ಸಹಾಯಾನುದಾನ ಸಾಮಾನ್ಯ | 50.00 | 464.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 255.00 | 1331.00 |
| | | 422-ಪರಿಶಿಷ್ಟ ಜಾತಿ ಉಪ ಯೋಜನೆ | 33.00 | 26.00 |
| | | 423-ಗಿರಿಜನ ಉಪ ಯೋಜನೆ | 17.00 | 10.00 |
| 7 | ಕುವೆಂಪು ವಿಶ್ವವಿದ್ಯಾಲಯ 2202-03-102-0-08 | 101-ಸಹಾಯಾನುದಾನ-ವೇತನಗಳು | 5792.00 | 6648.00 |
| | | 103-ಸಹಾಯಾನುದಾನ ಸಾಮಾನ್ಯ | 50.00 | 38.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 783.00 | 1850.70 |
| | | 422-ಪರಿಶಿಷ್ಟ ಜಾತಿ ಉಪ | 00.00 | 8.50 |

| ಕ್ರ. ಸಂ | ವಿಶ್ವವಿದ್ಯಾಲಯಗಳ ಹೆಸರು ಮತ್ತು ಲೆಕ್ಕ ಶೀರ್ಷಿಕೆ | ಉಪ ಲೆಕ್ಕ ಶೀರ್ಷಿಕೆ | 2021-22ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ | 2022-23ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ |
|---|---|---|---|---|
| | | ಯೋಜನೆ | | |
| | | 423-ಗಿರಿಜನ ಉಪ ಯೋಜನೆ | 00.00 | 3.50 |
| 8 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ 2202-03-102-0-22 | 101-ಸಹಾಯಾನುದಾನ-ವೇತನಗಳು | 1338.00 | 1413.00 |
| | | 102-ಸಹಾಯಾನುದಾನ-ಆಸ್ತಿಗಳ ಸೃಜನೆ | 50.00 | 76.00 |
| | | 103-ಸಹಾಯಾನುದಾನ-ಸಾಮಾನ್ಯ | 00.00 | 100.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 53.00 | 55.00 |
| | | 422-ಪರಿಶಿಷ್ಟ ಜಾತಿ ಉಪ ಯೋಜನೆ | 33.00 | 17.00 |
| | | 423-ಗಿರಿಜನ ಉಪ ಯೋಜನೆ | 17.00 | 7.00 |
| 9 | ತುಮಕೂರು ವಿಶ್ವವಿದ್ಯಾಲಯ 2202-03-102-0-23 | 101-ಸಹಾಯಾನುದಾನ-ವೇತನಗಳು | 2565.00 | 2961.00 |
| | | 102-ಸಹಾಯಾನುದಾನ-ಆಸ್ತಿಗಳ ಸೃಜನೆ | 00.00 | 1000.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 80.00 | 85.00 |
| 10 | ದಾವಣಗೆರೆ ವಿಶ್ವವಿದ್ಯಾಲಯ 2202-03-102-0-31 | 101-ಸಹಾಯಾನುದಾನ-ವೇತನಗಳು | 2403.00 | 2670.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 88.00 | 90.00 |
| 11 | ವಿಜಯನಗರ ವಿಶ್ವವಿದ್ಯಾಲಯ 2202-03-102-0-33 | 101-ಸಹಾಯಾನುದಾನ-ವೇತನಗಳು | 1969.99 | 2152.00 |
| | | 102-ಸಹಾಯಾನುದಾನ-ಆಸ್ತಿಗಳ ಸೃಜನೆ | 50.00 | 38.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 236.00 | 236.00 |
| | | 422-ಪರಿಶಿಷ್ಟ ಜಾತಿ ಉಪ ಯೋಜನೆ | 00.00 | 8.50 |
| | | 423-ಗಿರಿಜನ ಉಪ ಯೋಜನೆ | 00.00 | 3.50 |
| 12 | ಬೆಳಗಾವಿ ವಿಶ್ವವಿದ್ಯಾಲಯ 2202-03-102-0-34 | 101-ಸಹಾಯಾನುದಾನ-ವೇತನಗಳು | 2926.00 | 3375.00 |
| | | 102-ಸಹಾಯಾನುದಾನ-ಆಸ್ತಿಗಳ ಸೃಜನೆ | 50.00 | 38.00 |
| | | 103-ಸಹಾಯಾನುದಾನ ಸಾಮಾನ್ಯ | 00.00 | 200.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 88.00 | 90.00 |
| | | 422-ಪರಿಶಿಷ್ಟ ಜಾತಿ ಉಪ ಯೋಜನೆ | 00.00 | 8.50 |
| | | 423-ಗಿರಿಜನ ಉಪ ಯೋಜನೆ | 00.00 | 3.50 |

| ಕ್ರ. ಸಂ | ವಿಶ್ವವಿದ್ಯಾಲಯಗಳ ಹೆಸರು ಮತ್ತು ಲೆಕ್ಕ ಶೀರ್ಷಿಕೆ | ಉಪ ಲೆಕ್ಕ ಶೀರ್ಷಿಕೆ | 2021-22ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ | 2022-23ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ |
|---|---|---|---|---|
| 13 | ಜಾನಪದ ವಿಶ್ವವಿದ್ಯಾಲಯ 2202-03-102-0-35 | 101-ಸಹಾಯಾನುದಾನ-ವೇತನಗಳು | 85.00 | 126.00 |
| | | 102-ಸಹಾಯಾನುದಾನ-ಆಸ್ತಿಗಳ ಸೃಜನೆ | 50.00 | 76.00 |
| | | 103-ಸಹಾಯಾನುದನ ಸಾಮಾನ್ಯ | 00.00 | 400.00 |
| | | 422-ಪರಿಶಿಷ್ಟ ಜಾತಿ ಉಪ ಯೋಜನೆ | 33.00 | 17.00 |
| | | 423-ಗಿರಿಜನ ಉಪ ಯೋಜನೆ | 17.00 | 7.00 |
| 14 | ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯ 2202-03-102-0-39 | 101-ಸಹಾಯಾನುದಾನ-ವೇತನಗಳು | 552.00 | 720.00 |
| 15 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ 2202-03-102-0-40 | 101-ಸಹಾಯಾನುದಾನ-ವೇತನಗಳು | 159.00 | 252.00 |
| | | 103-ಸಹಾಯಾನುದಾನ ಸಾಮಾನ್ಯ | 50.00 | 176.00 |
| | | 422-ಪರಿಶಿಷ್ಟ ಜಾತಿ ಉಪ ಯೋಜನೆ | 33.00 | 17.00 |
| | | 423-ಗಿರಿಜನ ಉಪ ಯೋಜನೆ | 17.00 | 7.00 |
| 16 | ಸಂಗೀತ ವಿಶ್ವವಿದ್ಯಾಲಯ 2205-00-101-0-08 | 101-ಸಹಾಯಾನುದಾನ-ವೇತನಗಳು | 31.00 | 135.00 |
| | | 102/103-ಸಹಾಯಾನುದಾನ-ಆಸ್ತಿಗಳ ಸೃಜನೆ | 50.00 | 100.00 |
| 17 | ಸಂಸ್ಕೃತ ವಿಶ್ವವಿದ್ಯಾಲಯ 2202-05-103-0-23 | 101-ಸಹಾಯಾನುದಾನ-ವೇತನಗಳು | 836.00 | 899.00 |
| | | 103-ಸಹಾಯಾನುದಾನ ಆಸ್ತಿಗಳ ಸೃಜನೆ | 69.48 | 100.00 |
| | | 118-ಸಹಾಯಾನುದಾನ-ವಿಶ್ರಾಂತಿ ವೇತನ | 00.00 | 50.00 |
| 18 | ರಾಯಚೂರು ವಿ.ವಿ. 2202-03-102-0-41 | 101-ಸಹಾಯಾನುದಾನ-ವೇತನಗಳು | 00.00 | 92.00 |
| | | 103-ಸಹಾಯಯನುದಾನ ಸಾಮಾನ್ಯ | 50.00 | 100.00 |
| 19 | ಮಂಡ್ಯ ವಿ.ವಿ. 2202-03-102-0-42 | 101-ಸಹಾಯಾನುದಾನ-ವೇತನಗಳು | 3.97 | 39.00 |
| | | 103-ಸಹಾಯನುದಾನ ಸಾಮಾನ್ಯ | 50.00 | 100.00 |
| 20 | ಮಹಾರಾಣಿ ವಿಶ್ವವಿದ್ಯಾಲಯ 2202-03-102-0-43- | 101-ಸಹಾಯಾನುದಾನ-ವೇತನಗಳು | 27.05 | 43.00 |
| | | 103-ಸಹಾಯನುದಾನ-ಸಾಮಾನ್ಯ | 50.00 | 200.00 |
| 21 | ನೃಪತುಂಗ ವಿಶ್ವವಿದ್ಯಾಲಯ 2202-03-102-0-44 | 101-ಸಹಾಯಾನುದಾನ-ವೇತನಗಳು | 00.00 | 39.00 |
| | | 103-ಸಹಾಯನುದಾನ-ಸಾಮಾನ್ಯ | 50.00 | 475.79 |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 487 |
| ಸದಸ್ಯರ ಹೆಸರು | ಶ್ರೀ ಈಶ್ವರ್ ಬಿ. ಖಂಡ್ರೆ (ಭಾಲ್ಕಿ) |
| ಉತ್ತರಿಸಬೇಕಾದ ದಿನಾಂಕ | 16/02/2023 |
| ಉತ್ತರಿಸುವ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ಬ್ರಿಮ್ಸ್ ಆಸ್ಪತ್ರೆಯ ಕಟ್ಟಡದ ಛಾವಣಿಯಿಂದ ನೀರು ಸೋರುತ್ತಿರುವುದು ಮತ್ತು ನೂತನ ಆಸ್ಪತ್ರೆ ಕಟ್ಟಡಕ್ಕೆ ಈವರೆಗೆ ಅಗ್ನಿಶಾಮಕ ಸುರಕ್ಷತೆ ಪ್ರಮಾಣಪತ್ರ ಪಡೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಆವರಣದಲ್ಲಿ ನಿರ್ಮಿಸಲಾಗಿರುವ 450 ಹಾಸಿಗೆಗಳ ನೂತನ ಆಸ್ಪತ್ರೆ ಕಟ್ಟಡದಲ್ಲಿ ಮೇಲ್ಛಾವಣಿ ಸೋರುವಿಕೆ ಹಾಗೂ ಇನ್ನಿತರೆ ಸಣ್ಣ ಪುಟ್ಟ ದೋಷಗಳಿದ್ದು, ಒಟ್ಟಾರೆ ನೂತನ ಆಸ್ಪತ್ರೆ ಕಟ್ಟಡ ಸುಸ್ಥಿತಿಯಲ್ಲಿದ್ದು ಸಾರ್ವಜನಿಕ ಉಪಯೋಗದಲ್ಲಿರುತ್ತದೆ. ನೂತನ ಆಸ್ಪತ್ರೆ ಜಿ+6 ಕಟ್ಟಡದಲ್ಲಿ ಕೆಟಿಟಿಪಿ ನಿಯಮಗಳನ್ವಯ ಅಗ್ನಿಶಾಮಕ ಸೇವೆಗಳಿಗಾಗಿ ಟೆಂಡರ್ ಕರೆಯಲಾಗಿದ್ದು, ಅಗ್ನಿಶಾಮಕ & ತುರ್ತು ಸೇವೆಗಳ ಇಲಾಖೆಗಳಿಂದ ಎನ್‌ಓಸಿ ಪಡೆಯುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ) | ಬಂದಿದ್ದರೆ, ಸುರಕ್ಷತಾ ಪ್ರಮಾಣ ಪತ್ರ ಪಡೆಯಲು ಮತ್ತು ಕಳಪೆ ಕಾಮಗಾರಿ ಕೈಗೊಂಡವರ ವಿರುದ್ಧ ಕೈಗೊಂಡಿರುವ ಕ್ರಮಗಳೇನು; | ಅಗ್ನಿಶಾಮಕ ಸೇವೆಗಳಿಗೆ ಸಂಸ್ಥೆಯಿಂದ ಅಗ್ನಿಶಾಮಕ ತುರ್ತು ಸೇವೆಗಳ ಇಲಾಖೆಗೆ ಪಾವತಿಸಬೇಕಾಗಿರುವ ದಂಡ ಶುಲ್ಕ ಮೊತ್ತ ರೂ.1.34 ಕೋಟಿಗಳ ಮಂಜೂರಾತಿಗಾಗಿ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲು ಸೂಕ್ತ ಪ್ರಸ್ತಾವನೆ ಸಲ್ಲಿಸುವಂತೆ ನಿರ್ದೇಶಕರು, ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಇವರಿಗೆ ಪತ್ರ ಬರೆಯಲಾಗಿದೆ.<br><br>ಮತ್ತು ಲೋಕೋಪಯೋಗಿ ಇಲಾಖೆಯಿಂದ ಕೈಗೊಳ್ಳಲಾಗಿರುವ ಬ್ರಿಮ್ಸ್ ಬೋಧಕ ಆಸ್ಪತ್ರೆಯ ಕಟ್ಟಡ ಕಾಮಗಾರಿಯ ಗುಣಮಟ್ಟದ ಬಗ್ಗೆ 2021-22ನೇ ಸಾಲಿನಲ್ಲಿ ನಡೆದ ಸಾರ್ವಜನಿಕ ಲೆಕ್ಕಪತ್ರ ಸಮಿತಿ ಸಭೆಯ ತೀರ್ಮಾನದನ್ವಯ ಕಟ್ಟಡ ಪರಿವೀಕ್ಷಣೆಯನ್ನು ದಿನಾಂಕ:09.11.2022 ರಂದು ಕೈಗೊಳ್ಳಲಾಗಿರುತ್ತದೆ. Joint Experts ತಂಡವು ನೀಡಿರುವ ವರದಿಯಂತೆ ಗುತ್ತಿಗೆದಾರ ಸಂಸ್ಥೆಯಾದ ಎನ್ ಸಿಸಿ ಸಂಸ್ಥೆಗೆ ಈಗಾಗಲೇ ಬಿಡುಗಡೆ ಮಾಡಲಾಗಿರುವ ಅನುದಾನದಲ್ಲಿ ಸಮರ್ಪಕವಾಗಿ ಕೈಗೊಳ್ಳದೇ ಇರುವ ಆಸ್ಪತ್ರೆಯ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಿಕೊಡುವಂತೆ ಸೂಚಿಸಲಾಗಿರುತ್ತದೆ.<br><br>ಬ್ರೀಮ್ಸ್ ಬೋಧಕ ಆಸ್ಪತ್ರೆಯ ಕಟ್ಟಡದ ಮೇಲ್ಛಾವಣಿಗಳು ಮಳೆ ನೀರು ಸಂಗ್ರಹದಿಂದ ಸೋರುತ್ತಿದ್ದು, ಈ ಸಂಬಂಧ ಲೋಕೋಪಯೋಗಿ ಇಲಾಖೆಯೊಂದಿಗೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಇಂಜಿನಿಯರಿಂಗ್ ಘಟಕಗಳ ಸಮನ್ವಯದೊಂದಿಗೆ ಪರಿವೀಕ್ಷಣೆಗಳನ್ನು ಕೈಗೊಳ್ಳಲಾಗಿರುತ್ತದೆ. ಮುಖ್ಯವಾಗಿ ಜಿ+6 ಕಟ್ಟಡದ ನಿರ್ವಹಣೆಯಲ್ಲಿ ಸಣ್ಣ ಪುಟ್ಟ ದೋಷಗಳಿರುವುದನ್ನು ಗಮನಿಸಲಾಗಿರುತ್ತದೆ. ಈ ಸಂಬಂಧ ಸದರಿ ಕಟ್ಟಡದ ನಿರ್ವಹಣೆಗಾಗಿ ಸೇವಾ ಗುತ್ತಿಗೆ ಪಡೆಯಲು ತೀರ್ಮಾನಿಸಲಾಗಿರುತ್ತದೆ. |

| | | |
|---|---|---|
| ಇ) | ಆಸ್ಪತ್ರೆಯ ಕ್ಯಾಥ್ ಲ್ಯಾಬ್‌ಗೆ ಹಣ ಬಿಡುಗಡೆ ಆಗಿ ನಾಲ್ಕು ವರ್ಷವೇ ಕಳೆದಿದ್ದರೂ, ಇನ್ನೂ ಕ್ಯಾಥ್ ಲ್ಯಾಬ್ ಆರಂಭವೇ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ವಿಳಂಬಕ್ಕೆ ಕಾರಣರಾದವರ ವಿರುದ್ಧ ಕೈಗೊಂಡಿರುವ ಕ್ರಮ ಏನು; | 2018-19ನೇ ಸಾಲಿನ ಆಯವ್ಯಯದಲ್ಲಿ ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್ ಇಲ್ಲಿ ರೂ.15.00 ಕೋಟಿಗಳ ವೆಚ್ಚದಲ್ಲಿ ಕಾರ್ಡಿಯಾಕ್ ಕೇರ್ ಯೂನಿಟ್ ಸ್ಥಾಪಿಸಲು ಘೋಷಿಸಿ, ಯೋಜನಾ ಕಾರ್ಯಕ್ರಮವನ್ನಾಗಿ ಜಾರಿಗೆ ತರಲಾಗಿದೆ. ಹಾಗೂ 2018-19ನೇ ಸಾಲಿನಲ್ಲಿ ರೂ.725.00 ಲಕ್ಷ ವೆಚ್ಚದಲ್ಲಿ ಕ್ಯಾಥ್ ಲ್ಯಾಬ್ ಸೌಲಭ್ಯದೊಂದಿಗೆ ಹೃದಯ ಚಿಕಿತ್ಸಾ ಘಟಕವನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡಿ, ಸರ್ಕಾರದ ಆದೇಶ ಸಂ: ಆಕುಕ 242 ಎಂಎಸ್‌ಎಫ್ 2018, ದಿನಾಂಕ: 10-11-2018ರಲ್ಲಿ ಬಿಡುಗಡೆಯಾಗಿರುವ ಅನುದಾನವನ್ನು 75 Bedded Super Specialty Cardiac Care Unit ಗೆ ಅವಶ್ಯಕವಿರುವ ಉಪಕರಣಗಳ ಖರೀದಿಗಾಗಿ ಮೀಸಲಿಡಲಾಗಿರುತ್ತದೆ. |
| ಈ) | ಎಷ್ಟು ದಿನಗಳ ಒಳಗಾಗಿ ಲ್ಯಾಬ್ ಆರಂಭಿಸಲಾಗುವುದು? (ಮಾಹಿತಿ ಒದಗಿಸುವುದು) | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ 75 Bedded Super Specialty Cardiac care Unit ಸ್ಥಾಪಿಸಲು ಅವಶ್ಯವಿರುವ ಹೆಚ್ಚುವರಿ ಅನುದಾನಕ್ಕೆ ಸಂಬಂಧಿಸಿದಂತೆ, ಸಂಸ್ಥೆಯ ದಿನಾಂಕ:19-06-2019ರಂದು ಜರುಗಿದ 28ನೇ ಆಡಳಿತ ಮಂಡಳಿ ಸಭೆಯಲ್ಲಿ ರೂ.10.80 ಕೋಟಿಗಳ ಪರಿಷ್ಕೃತ ವೆಚ್ಚದಲ್ಲಿ ಸ್ಥಾಪಿಸಲು ನಿರ್ಣಯಿಸಲಾಗಿರುತ್ತದೆ.<br><br>ಸದರಿ ಕ್ಯಾಥ್ ಲ್ಯಾಬ್ ಗೆ ಈ ಸಂಸ್ಥೆಯ 450 ಹಾಸಿಗೆಗಳ ಹೊಸ ಕಟ್ಟಡದ 2ನೇ ಮಹಡಿಯಲ್ಲಿ ಸ್ಥಳ ಗುರುತಿಸಲಾಗಿದ್ದು, ನಮೂದಿತ ಮಹಡಿಯಲ್ಲಿ ಅವಶ್ಯಕತೆಗನುಗುಣವಾಗಿ ಸಿವಿಲ್ ಕಾಮಗಾರಿಗಳು ಕೈಗೊಳ್ಳಬೇಕಾಗಿರುತ್ತದೆ. ಈ ಸಂಬಂಧ, ಕಲ್ಬುರ್ಗಿಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಇಂಜಿನಿಯರಿಂಗ್ ಘಟಕದಿಂದ ಅಂದಾಜು ಪಟ್ಟಿ ಸ್ವೀಕೃತವಾಗಿದ್ದು, ಸದರಿ ಅಂದಾಜು ಪಟ್ಟಿಗೆ ದಿನಾಂಕ: 23-08-2021 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ ನಿರ್ಣಯದಂತೆ ಸಿವಿಲ್ ಕಾಮಗಾರಿಗಳನ್ನು ಕೈಗೊಳ್ಳಲು ಹೆಚ್ಚುವರಿ ಅನುದಾನಕ್ಕಾಗಿ ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಗೆ ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ವತಿಯಿಂದ ಈಗಾಗಲೇ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. 75 Bedded Super Specialty Cardiac Care Unit ಕಾರ್ಯಗತಗೊಳಿಸುವ ಸಂಬಂಧ ಸಿವಿಲ್ ಕಾಮಗಾರಿಗಾಗಿ ಬೇಕಾಗಿರುವ ಹೆಚ್ಚುವರಿ ಅನುದಾನ ಕ್ರೋಢೀಕರಿಸಿದ ನಂತರ ಸಿವಿಲ್ ಕಾಮಗಾರಿಯನ್ನು ಕೈಗೊಂಡು, ಅವಶ್ಯಕ ಉಪಕರಣಗಳನ್ನು ಈಗಾಗಲೇ ಬಿಡುಗಡೆಯಾಗಿರುವ ಅನುದಾನದಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ರವರ ಮೇಲುಸ್ತುವಾರಿಯಲ್ಲಿ ಚಾಲ್ತಿ ಕೆಟಿಪಿಪಿ ನಿಯಮಗಳನ್ವಯ ಖರೀದಿಸಿ, 75 Bedded Super Specialty Cardiac Care Unit ಅನ್ನು ಪೂರ್ಣ ಪ್ರಮಾಣದಲ್ಲಿ ಕಾರ್ಯಗತಗೊಳಿಸಲಾಗುವುದು. |

ಕಡತ ಸಂಖ್ಯೆ: ಎಂಇಡಿ 95 ಎಂಎಸ್‌ಎಫ್ 2023

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 488 |
| ಮಾನ್ಯ ಸದಸ್ಯರ ಹೆಸರು | ಶ್ರೀ ಈಶ್ವರ ಬಿ. ಖಂಡ್ರೆ (ಬಾಲ್ಕಿ) |
| ಉತ್ತರಿಸಬೇಕಾದ ದಿನಾಂಕ | 16/02/2023 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ವೈದ್ಯಕೀಯ ವಿಜ್ಞಾನ ಸಂಸ್ಥೆ ಮತ್ತು ಆಸ್ಪತ್ರೆ (ಬ್ರಿಮ್ಸ್) ಯಲ್ಲಿ 150 ವಿದ್ಯಾರ್ಥಿಗಳ ಪ್ರವೇಶಾವಕಾಶ ಮತ್ತು 750 ಹಾಸಿಗೆಗಳ ಆಸ್ಪತ್ರೆಗೆ ಕನಿಷ್ಠ ಅಗತ್ಯಕ್ಕೆ ಅನುಗುಣವಾಗಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ನಿಯಮಾನುಸಾರ ಭರ್ತಿ ಮಾಡಲಾಗಿದೆಯೇ; | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್‌ಗೆ 2016-17ನೇ ಸಾಲಿನಿಂದ 150 ಎಂಬಿಬಿಎಸ್ ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಕೇಂದ್ರ ಸರ್ಕಾರದ ಅನುಮತಿ ದೊರಕಿದ್ದು, ಅದರಂತೆ, 150 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡಲಾಗಿದೆ. ಭಾರತೀಯ ವೈದ್ಯಕೀಯ ಪರಿಷತ್ತಿನ ನಿಯಮಗಳನ್ವಯ 150 ಎಂಬಿಬಿಎಸ್ ವಿದ್ಯಾರ್ಥಿಗಳ ಪ್ರವೇಶಾತಿಗೆ ಕನಿಷ್ಠ ಮಾನದಂಡದಂತೆ ಬೋಧಕ ಸಿಬ್ಬಂದಿಗಳನ್ನು ನಿಯಮಾನುಸಾರ ಭರ್ತಿ ಮಾಡಲಾಗಿರುತ್ತದೆ. (ವಿವರವನ್ನು ಅನುಬಂಧ-1 ರಲ್ಲಿರಿಸಿದೆ)<br><br>ಮುಂದುವರೆದು ಬೋಧಕೇತರ ಸಿಬ್ಬಂದಿಗಳನ್ನು 2007ರಲ್ಲಿ 100 ವಿದ್ಯಾರ್ಥಿಗಳ ಪ್ರವೇಶಾತಿ ಜಾರಿಯಲ್ಲಿದ್ದು, Minimum standard Requirement for 100 MBBS Admission ನಂತೆ ಹಾಗೂ 300 ಹಾಸಿಗೆಗಳ ಆಸ್ಪತ್ರೆಗೆ ಬೋಧಕೇತರ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದ್ದು, ವಿವರವನ್ನು ಅನುಬಂಧ-2 ರಲ್ಲಿರಿಸಲಾಗಿದೆ. ಈ ಪೈಕಿ ಬಹುತೇಕ ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೇಲೆ ಪಡೆಯಲಾಗುತ್ತಿದೆ. ಹಾಗೂ ಬೋಧಕೇತರ ಹುದ್ದೆಗಳ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಸಂಸ್ಥೆಗೆ ಹೊಂದಿಕೊಂಡಿರುವ ಬೋಧಕ ಆಸ್ಪತ್ರೆ ನಿರ್ವಹಿಸಲು ಅತ್ಯವಶ್ಯವಿರುವ 18 Data Entry Operator ಹುದ್ದೆಗಳನ್ನು ಸಂಸ್ಥೆಯ ಆಂತರಿಕ ಸಂಪನ್ಮೂಲದಿಂದ ವೆಚ್ಚ ಭರಿಸುವ ಷರತ್ತಿಗೊಳಪಟ್ಟು ಹುದ್ದೆ ಸೃಜನೆಯಿಲ್ಲದೇ ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲು ಹಾಗೂ ಭದ್ರತಾ ಮತ್ತು ಸ್ವಚ್ಛತಾ ಸಿಬ್ಬಂದಿಗಳನ್ನು ಸೇವಾ ಗುತ್ತಿಗೆ ಆಧಾರದ ಮೇಲೆ ಪಡೆಯಲು ಅನುಮತಿ ನೀಡಲಾಗಿದೆ.<br><br>Minimum Standard Requirement for 150 MBBS Admissions ರನ್ವಯ ಅವಶ್ಯಕ ಬೋಧಕ ಹುದ್ದೆಗಳನ್ನು ಸೃಜಿಸುವ ಪ್ರಸ್ತಾವನೆ ಪರಿಶೀಲನೆಯಲ್ಲಿರುತ್ತದೆ. |
| ಆ) | ಬ್ರಿಮ್ಸ್ ನಲ್ಲಿ ಡಿ ಗ್ರೂಪ್ ಸ್ವಚ್ಛತಾ ಸಿಬ್ಬಂದಿಯ ಕೊರತೆಯಿಂದಾಗಿ ನೈರ್ಮಲ್ಯ ಇಲ್ಲದೆ, ಆಸ್ಪತ್ರೆಯಲ್ಲಿ ರೋಗ ಹರಡುವ ತಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬ್ರಿಮ್ಸ್ ಬೋಧಕ ಆಸ್ಪತ್ರೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಈ ಹಿಂದಿನ ಜಿಲ್ಲಾ ಆಸ್ಪತ್ರೆ, ಬೀದರ್ ಗೆ ಒಟ್ಟು 111 ಗ್ರೂಪ್-ಡಿ ಹುದ್ದೆಗಳು ಮಂಜೂರಾಗಿದ್ದು, ಒಟ್ಟು 129 ಹೊರಗುತ್ತಿಗೆ ಸಿಬ್ಬಂದಿಗಳು ಜಿಲ್ಲಾಧಿಕಾರಿಗಳು, ಬೀದರ್ ರವರ ಅಧೀನದಲ್ಲಿರುವ ಜಿಲ್ಲಾ ಕಾರ್ಮಿಕ ವಿವಿಧೋದ್ದೇಶ ಸಹಕಾರ ಸಂಘದ ಮೂಲಕ ಮತ್ತು 18 ಖಾಯಂ ಸಿಬ್ಬಂದಿಗಳು ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯ ನಿರತ 129 ಹೊರಗುತ್ತಿಗೆ ಸಿಬ್ಬಂದಿಗಳಲ್ಲಿ 75 ಸಿಬ್ಬಂದಿಗಳು ಸ್ವಚ್ಛತಾ ಕಾರ್ಯ ನಿರ್ವಹಿಸುತ್ತಿದ್ದಾರೆ.<br><br>ಆಸ್ಪತ್ರೆಗೆ ಸಂಬಂಧಿಸಿದ ಸ್ವಚ್ಛತಾ ಕಾರ್ಯ ಹಾಗೂ ಹೌಸ್ ಕೀಪಿಂಗ್ ಸೇವೆಯನ್ನು ಸೇವಾ ಗುತ್ತಿಗೆ ಆಧಾರದಲ್ಲಿ ಪಡೆಯಲು ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಕೆ.ಟಿ.ಪಿ.ಪಿ. ನಿಯಮಾನುಸಾರ ಟೆಂಡರ್ ಪ್ರಕ್ರಿಯೆಯು ಚಾಲ್ತಿಯಲ್ಲಿರುತ್ತದೆ. |
| ಇ) | ಬಂದಿದ್ದಲ್ಲಿ, ಸ್ವಚ್ಛತೆ ಕಾಪಾಡಲು ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | |

ಕಡತ ಸಂ: ಎಂಇಡಿ 93 ಎಂ ಎಸ್ ಎಫ್ 2023

(ಡಾ|| ಕೆ. ಸುಧಾಕರ್)
ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು.

GOVERNMENT OF KARNATAKA

# BIDAR INSTITUTE OF MEDICAL SCIENCES, BIDAR.

(Autonomous Institution of Govt. of Karnataka)
Affiliated to Rajiv Gandhi University of Health Sciences, Karnataka, Bangalore &
Recognized by Govt. of India, New Delhis
Phone: 08482 228366 / Fax No: 08482 240322.
Website:- www. Brims-bidar.in & email:- directorbrimsbidar2007@gmail.com

## TEACHING FACULTY REQUIRED AND WORKING AS PER MCI/NMC MSR FOR 150 MBBS ADMISSIONS.

| Sl. No. | Department | Professor (Sanctioned-21) | | Associate Professor (Sanctioned-32) | | Assistant Professor (Sanctioned -48) | | Senior Resident (Sanctioned-44) | | Junior Resident (Sanctioned-58) | | Tutor (Sanctioned-34) | |
|---|---|---|---|---|---|---|---|---|---|---|---|---|---|
| | | R | W | R | W | R | W | R | W | R | W | R | W |
| 01 | Anatomy | 01 | 01 | 01 | 01 | 02 | 03 | - | - | - | - | 03 | 01 |
| 02 | Physiology | 01 | 01 | 01 | 01 | 02 | 02 | - | - | - | - | 03 | 03 |
| 03 | Biochemistry | 01 | 01 | 01 | 01 | 02 | 02 | - | - | - | - | 04 | 04 |
| 04 | Pharmacology | 01 | 01 | 01 | 01 | 02 | 03 | - | - | - | - | 03 | 02 |
| 05 | Pathology | 01 | 00 | 03 | 04 | 03 | 03 | - | - | - | - | 05 | 05 |
| 06 | Microbiology | 01 | 01 | 01 | 01 | 02 | 03 | - | - | - | - | 04 | 04 |
| 07 | Forensic Medicine | 01 | 01 | 01 | 01 | 01 | 01 | - | - | - | - | 03 | 02 |
| 08 | Community Medicine | 01 | 01 | 02 | 02 | 04 | 04 | - | - | - | - | 04 | 02 |
| 09 | General Medicine | 01 | 01 | 04 | 03 | 05 | 05 | 05 | 06 | 10 | 02 | - | - |
| 10 | Paediatrics | 01 | 01 | 02 | 02 | 03 | 03 | 03 | 02 | 06 | 01 | - | - |
| 11 | TB & Respiratory Diseases | 01 | 00 | 00 | 01 | 01 | 01 | 01 | 01 | 01 | 00 | - | - |
| 12 | Dermatology, Venerology & Leprosy. | 00 | 01 | 01 | 01 | 01 | 00 | 01 | 02 | 00 | 00 | - | - |
| 13 | Psychiatry | 00 | 00 | 01 | 01 | 01 | 01 | 01 | 01 | 01 | 00 | - | - |
| 14 | General Surgery | 01 | 01 | 04 | 03 | 05 | 05 | 05 | 06 | 10 | 04 | - | - |
| 15 | Orthopaedics | 01 | 01 | 02 | 01 | 03 | 03 | 03 | 02 | 06 | 01 | - | - |
| 16 | Otorhinolaryngology (ENT) | 01 | 01 | 01 | 00 | 01 | 01 | 01 | 01 | 01 | 01 | - | - |
| 17 | Ophthalmology | 01 | 01 | 01 | 01 | 01 | 01 | 01 | 01 | 01 | 01 | - | - |
| 18 | Obstetrics & Gynaecology | 01 | 01 | 02 | 03 | 03 | 04 | 03 | 03 | 06 | 00 | - | - |
| 19 | Anaesthesiology | 01 | 00 | 03 | 03 | 05 | 04 | 03 | 04 | 6 | 1 | - | - |
| 20 | Radio diagnosis | 01 | 00 | 01 | 00 | 01 | 01 | 03 | 02 | 00 | 00 | - | - |
| 21 | Dentistry | 01 | 01 | 01 | 01 | 01 | 01 | 00 | 00 | 01 | 02 | - | - |
| | **Total** | **19** | **16** | **34** | **32** | **49** | **51** | **30** | **31** | **49** | **13** | **29** | **23** |

**DIRECTOR**
**Bidar Institute of Medical Sciences,**
**Bidar.**

DIRECTOR
Bidar Institute of Medical, Science
Bidar

# ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್.

(ಕರ್ನಾಟಕ ಸರಕಾರದ ಸ್ವಾಯತ್ ಸಂಸ್ಥೆ)

ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ,

ಕರ್ನಾಟಕ ಬೆಂಗಳೂರಿಗೆ ಸಂಯೋಜನೆಗೊಂಡಿದ್ದು, ಭಾರತ ಸರಕಾರ ನವದೆಹಲಿಯವರಿಂದ ಅಂಗೀಕೃತವಾಗಿರುತ್ತದೆ.

(ದೂರವಾಣಿ ಸಂಖ್ಯೆ: 08482/228366, ಫ್ಯಾಕ್ಸ್: 08482/240322)

www.bimsbidar.karnataka.gov.in & email:- directorbrimsbidar2007@gmail.com


## ಬ್ರಿಮ್ಸ್ ಸಂಸ್ಥೆಯ ವೃಂದವಾರು (ಎ,ಬಿ,ಸಿ & ಡಿ) ಹುದ್ದೆಯ ಮಾಹಿತಿ.

## ದಿನಾಂಕ 09/12/2022.

| ಕ್ರ.ಸಂ. | ಹುದ್ದೆಯ ಹೆಸರು | | ಕರ್ತವ್ಯ ನಿರತ | | | | |
|---|---|---|---|---|---|---|---|
| ಗ್ರೂಪ್ "ಎ" | | ಮಂಜೂರಾತಿ | ಖಾಯಂ | ಗುತ್ತಿಗೆ | ಹೊರ ಗುತ್ತಿಗೆ | ಒಟ್ಟು | ಖಾಲಿ |
| 1 | ನಿರ್ದೇಶಕರು | 01 | 01 | --- | --- | 01 | 00 |
| 2 | ಪ್ರಾಂಶುಪಾಲರು | 01 | --- | --- | --- | | 01–ಪ್ರಭಾರಿ |
| 3 | ಪ್ರಾಧ್ಯಾಪಕರು | 21 | 15 | --- | --- | 15 | 06 |
| 4 | ಸಹ ಪ್ರಾಧ್ಯಾಪಕರು | 32 | 31 | 01 | --- | 32 | 00 |
| 5 | ಸಹಾಯಕ ಪ್ರಾಧ್ಯಾಪಕರು | 48 | 39 | 11 | --- | 50 | 00 |
| 6 | ಸಿನಿಯರ್ ರಸಿಡೆಂಟ್ | 44 | 14 | 16 | --- | 30 | 14 |
| 7 | ಟ್ಯೂಟರ್ | 34 | 02 | 22 | --- | 24 | 08 |
| 8 | ಜ್ಯೂನಿಯರ್ ರೆಸಿಡೆಂಟ್ | 58 | --- | 13 | --- | 13 | 45 |
| 9 | ಮುಖ್ಯ ಆಡಳಿತಾಧಿಕಾರಿ | 01 | --- | --- | --- | | 01-ಪ್ರಭಾರಿ |
| 10 | ಆರ್ಥಿಕ ಸಲಹೆಗಾರರು | 01 | --- | --- | --- | | 01–ಪ್ರಭಾರಿ |
| 11 | ಮಹಿಳಾ ವೈದ್ಯಾಧಿಕಾರಿ | 03 | 01 | --- | --- | 01 | 02 |
| | ಒಟ್ಟು:- | 244 | 103 | 63 | --- | 166 | 78 |
| ಗ್ರೂಪ್ "ಬಿ" | | | | | | | |
| 1 | ಕ್ಲಿನಿಕಲ್ ಸೈಕಾಲಜಿಸ್ಟ್ | 01 | 01 | --- | --- | | 00 |
| 2 | ಚೈಲ್ಡ್ ಸೈಕ್ಯಾಟ್ರಿಸ್ಟ್ | 01 | --- | --- | --- | | 01 |
| 3 | ಸ್ಟಾಟಿಸ್ಟಿಷಿಯನ್ ಕಂ ಸಹಾಯಕ ಲೆಕ್ಚರರ್ | 01 | 01 | --- | --- | | 00 |
| 4 | ಫಾರ್ಮಾಕೆಮಿಸ್ಟ | 01 | 01 | --- | --- | | 00 |
| 5 | ಫಿಜಿಸ್ಟ್ | 01 | 00 | --- | --- | | 01 |
| 6 | ಸ್ಪೀಚ್ ಥೆರಾಪಿಸ್ಟ್ | 03 | 00 | --- | --- | | 03 |
| | ಒಟ್ಟು:- | 08 | 03 | --- | --- | | 05 |

ಮುಂದುವರೆದಿದೆ -2

| ಕ್ರ.ಸಂ. | ಹುದ್ದೆಯ ಹೆಸರು | ಮಂಜೂರಾತಿ | ಕರ್ತವ್ಯ ನಿರತ | | | | |
|---|---|---|---|---|---|---|---|
| | ಗ್ರೂಪ್ "ಸಿ" | | ಖಾಯಂ | ಗುತ್ತಿಗೆ | ಹೊರ ಗುತ್ತಿಗೆ | ಒಟ್ಟು | ಖಾಲಿ |
| 1 | ಮುಖ್ಯ ಗ್ರಂಥಪಾಲಕರು | 01 | -- | -- | -- | | 01 |
| 2 | ಉಪ ಮುಖ್ಯ ಗ್ರಂಥಪಾಲಕರು | 01 | 01 | 00 | -- | | 00 |
| 2 | ಪಬ್ಲಿಕ್ ಹೆಲ್ತ್ ನರ್ಸ್ | 03 | 00 | 00 | -- | | 03 |
| 3 | ಶುಶ್ರೂಷಕರು | 255 | 211 | -- | 13 | | 31 |
| 4 | ರೇಡಿಯೋಗ್ರಾಫರ್ | 08 | 03 | -- | 04 | | 00 |
| 5 | ರೇಡಿಯೋಥೆರಾಪಿಸ್ಟ್ | 03 | -- | -- | -- | | 03 |
| 6 | ಫಿಜಿಯೋಥೆರಾಪಿಸ್ಟ್ | 02 | 00 | -- | 01 | | 01 |
| 7 | ಅಕ್ಯೂಪೇಶನ್ ಥೆರಾಪಿಸ್ಟ್ | 02 | 00 | -- | -- | | 02 |
| 9 | ಅರ್ಥೋಥೆರಾಪಿಸ್ಟ್ | 02 | 00 | -- | -- | | 02 |
| 10 | ಆಡಿಯೋಮೆಟ್ರಿ ಟೆಕ್ನಿಶಿಯನ್ | 01 | 00 | -- | 01 | | |
| 11 | ಕೌನ್ಸಿಲರ್ | 01 | 00 | -- | -- | | 01 |
| 12 | ಎಂ.ಎಸ್.ಡಬ್ಲ್ಯೂ. | 11 | 02 | -- | -- | | 09 |
| 13 | ಎಂ.ಆರ್.ಡಬ್ಲ್ಯೂ. | 04 | 00 | -- | -- | | 04 |
| 14 | ರೆಕಾರ್ಡ್ ಕೀಪರ್ ಕಂ ಕ್ಲರ್ಕ್/ ಎಂ.ಆರ್.ಟಿ. | 18 | 06 | 01 | 01 | | 11 |
| 15 | ಆರ್ಟಿಸ್ಟ್ | 01 | 00 | -- | -- | | 01 |
| 16 | ಟೆಕ್ನಿಶಿಯನ್ | 58 | 34 | -- | 01 | | 23 |
| 17 | ರೇಫ್ರಾಕ್ಷನಿಸ್ಟ್ | 01 | 00 | -- | -- | | 01 |
| 18 | ಎಲೆಕ್ಟ್ರೋ ಕಾರ್ಡಿಯೋಗ್ರಾಫರ್ | 01 | 00 | -- | -- | | 01 |
| 19 | ಡೆಂಟಲ್ ಟೆಕ್ನಿಶಿಯನ್ | 04 | 01 | -- | -- | | 03 |
| 20 | ಹೆಲ್ತ್ ಎಜ್ಯೂಕೇಟರ್ | 04 | 00 | -- | -- | | 04 |
| 21 | ಹೆಲ್ತ್ ಇನ್ಸಪೇಕ್ಟರ್ | 04 | 00 | -- | -- | | 04 |
| 22 | ಲೇಡಿ ಹೆಲ್ತ್ ವಿಜಿಟರ್ | 01 | 00 | -- | -- | | 01 |
| 23 | ಸಹಾಯಕ ಗ್ರಂಥಪಾಲಕರು | 02 | 02 | -- | -- | | |
| 24 | ಸಿನಿಯರ್ ಟೈಪಿಸ್ಟ್ | 01 | 00 | -- | -- | | 01 |
| 25 | ಸ್ಟೇನೋಗ್ರಾಫರ್ | 18 | -- | -- | 10 | | 08 |
| 26 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 22 | 02 | 04 | 14 | | 01 |
| 27 | ಮಾಡೆಲರ್ | 01 | 01 | -- | -- | | |
| | ಒಟ್ಟು:- | **430** | **263** | **05** | **45** | | **116** |
| | ಗ್ರೂಪ್ "ಡಿ" | | | | | | |
| 1 | ವಾಹನ ಚಾಲಕರು | 02 | 00 | -- | 02 | | |
| 2 | ಡಿಸೆಕ್ಷನ್ ಹಾಲ್ ಆರ್ಟಿಸ್ಟ್ | 06 | 00 | -- | 06 | | |
| 3 | ಲ್ಯಾಬ್ ಅಸಿಸ್ಟೆಂಟ್ ಕಂ ಅಟೆಂಡರ್ | 31 | 00 | -- | 31 | | |
| 4 | ಡಾರ್ಕ್ ರೂಂ ಅಸಿಸ್ಟೆಂಟ್ | 04 | 00 | -- | 04 | | 82. |
| 5 | ವರ್ಕಶಾಪ್ ವರ್ಕರ್ | 06 | 00 | -- | 06 | | |
| 6 | ಪೀವನ್ ಕಂ ಗ್ರೂಪ್ "ಡಿ" | 08 | 01 | -- | 07 | | |
| 7 | ಸ್ವೀಪರ್ಸ್ | 26 | 00 | -- | 26 | | |
| | ಒಟ್ಟು:- | **83** | **01** | -- | **82** | | |

ಮುಂದುವರೆದಿದೆ -3

ಕರ್ನಾಟಕ ಸರಕಾರ.

# ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್.

(ಕರ್ನಾಟಕ ಸರಕಾರದ ಸ್ವಾಯತ್ ಸಂಸ್ಥೆ)
ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ,
ಕರ್ನಾಟಕ ಬೆಂಗಳೂರಿಗೆ ಸಂಯೋಜನೆಗೊಂಡಿದ್ದು, ಭಾರತ ಸರಕಾರ ನವದೆಹಲಿಯವರಿಂದ ಅಂಗೀಕೃತವಾಗಿರುತ್ತದೆ.
(ದೂರವಾಣಿ ಸಂಖ್ಯೆ: 08482/228366, ಫ್ಯಾಕ್ಸ್: 08482/240322)
www.bimsbidar.karnataka.gov.in & email:- directorbrimsbidar2007@gmail.com

## Details of Cadre wise Staff Position as on 17.12.2022

| ಕ್ರಸಂ. | ಹುದ್ದೆಯ ಹೆಸರು | | ಕರ್ತವ್ಯ ನಿರತ | | | | |
|---|---|---|---|---|---|---|---|
| ಗ್ರೂಪ್ "ಎ" | | ಮಂಜೂರಾತಿ | ಖಾಯಂ | ಗುತ್ತಿಗೆ | ಹೊರ ಗುತ್ತಿಗೆ | ಒಟ್ಟು | ಖಾಲಿ |
| 1 | ತಜ್ಞರು | 33 | 31 | 0 | 0 | 33 | 2 |
| | ಒಟ್ಟು:- | 33 | 31 | 0 | 0 | 33 | 2 |
| | ಗ್ರೂಪ್ "ಬಿ" | | | | | | |
| 1 | ಕ್ಲೀನಿಕಲ್ ಸೈಕಾಲೋಜಿಸ್ಟ್ | 1 | 0 | 0 | 0 | 01 | 1 |
| 2 | ಸೈಕೇಟ್ರಿಕ್ ಸೋಷಿಯಲ್ ವರ್ಕರ್ | 1 | 1 | 0 | 0 | 01 | 0 |
| 3 | ಶುಶ್ರೂಷ ಅಧೀಕ್ಷಕರು ದರ್ಜೆ-1 | 1 | 0 | 0 | 0 | 1 | 1 |
| | ಒಟ್ಟು:- | 3 | 1 | 0 | 0 | 3 | 2 |

| ಕ್ರಸಂ. | ಹುದ್ದೆಯ ಹೆಸರು | ಮಂಜೂರಾತಿ | ಕರ್ತವ್ಯ ನಿರತ | | | | |
|---|---|---|---|---|---|---|---|
| | ಗ್ರೂಪ್ "ಸಿ" | | ಖಾಯಂ | ಗುತ್ತಿಗೆ | ಹೊರ ಗುತ್ತಿಗೆ | ಒಟ್ಟು | ಖಾಲಿ |
| 1 | ಶುಶ್ರೂಷಾಧೀಕ್ಷಕರು ದರ್ಜೆ-2 | 3 | 0 | 0 | 0 | 3 | 3 |
| 2 | ಉಪ ಜಿಲ್ಲಾ ಆರೋಗ್ಯ ಶಿಕ್ಷಣಾಧಿಕಾರಿಗಳು | 1 | 0 | 0 | 0 | 1 | 1 |
| 2 | ಕಛೇರಿ ಅಧೀಕ್ಷಕರು | 2 | 0 | 0 | 0 | 2 | 2 |
| 3 | ಹಿರಿಯ ಶುಶ್ರೂಷಕರು | 9 | 6 | 0 | 0 | 9 | 3 |
| 4 | ಜ್ಯೂನೀಯರ್ ಇಂಜಿನೀಯರ್ ದರ್ಜೆ3 | 1 | 0 | 0 | 0 | 1 | 1 |
| 5 | ಸಿನೀಯರ್ ಎನ್.ಎಂ.ಎಸ್ | 1 | 0 | 0 | 0 | 1 | 1 |

| 6 | ಹಿರಿಯ ಫಾರ್ಮಸಿಸ್ಟ್ | 4 | 2 | 0 | 0 | 4 | 2 |
|---|---|---|---|---|---|---|---|
| 7 | ಹಿ.ಪ್ರಯೋಗ ಶಾಲಾ ತಂತ್ರಜ್ಞರು | 4 | 4 | 0 | 0 | 4 | 0 |
| 9 | ಶುಶ್ರೂಷಕರು | 82 | 35 | 0 | 0 | 82 | 47 |
| 10 | ಫಿಜಿಯೋಥೇರಾಪಿಸ್ಟ್ | 1 | 1 | 0 | 0 | 1 | 1 |
| 11 | ರೇಡಿಯೋಗ್ರಾಫರ್ | 1 | 0 | 0 | 0 | 1 | 01 |
| 12 | ಅಕ್ಯೂಪೇಶನ್ ಥರಾಪಿಸ್ಟ್ | 1 | 0 | 0 | 0 | 1 | 1 |
| 13 | ಸಮಾಜ ಸೇವಕರು | 1 | 0 | 0 | 0 | 1 | 1 |
| 14 | ನ್ಯೂಟ್ರಿಶಿಯನ್ ಕೌಂಸಿಲರ್ | 2 | 0 | 0 | 0 | 2 | 2 |
| 15 | ಫಾರ್ಮಾಸಿಸ್ಟ್ ದರ್ಜೆ-2 | 1 | 0 | 0 | 0 | 01 | 1 |
| 16 | ಪ್ರಥಮ ದರ್ಜೆ ಸಹಾಯಕರು | 5 | 2 | 0 | 0 | 5 | 3 |
| 17 | ಹಿರಿಯ ನೇತ್ರಾಧಿಕಾರಿ | 1 | 0 | 0 | 0 | 1 | 01 |
| 18 | ಕಿರಿಯ ನೇತ್ರಾಧಿಕಾರಿ | 1 | 0 | 0 | 0 | 1 | 01 |
| 19 | ಕಿರಿಯ ಫಾರ್ಮಾಸಿಸ್ಟ್ | 4 | 1 | 1 | 0 | 4 | 02 |
| 20 | ಕಿರಿಯ ಪ್ರಯೋಗಶಾಲಾ ತಂತ್ರಜ್ಞರು | 5 | 3 | 0 | 0 | 5 | 02 |
| 21 | ಆರ್.ಡಿ.ಎಲ್ ತಂತ್ರಜ್ಞರು | 4 | 0 | 0 | 0 | 4 | 04 |
| 22 | ಕ್ಷ-ಕಿರಣ ತಂತ್ರಜ್ಞರು | 3 | 0 | -- | 1 | 3 | 02 |
| 23 | ಉಪಕರಣ ತಂತ್ರಜ್ಞರು | 7 | 1 | 0 | 0 | 7 | 6 |
| 24 | ವೈದ್ಯಕೀಯ ದಾಖಲೆ ತಂತ್ರಜ್ಞರು | 1 | 0 | 0 | 1 | 1 | 00 |
| 25 | ಡೆಂಟಲ್ ಮೇಕಾನಿಕ್ | 1 | 0 | 0 | 0 | 1 | 01 |
| 26 | ಡೈಟಿಶಿಯನ್ | 1 | 0 | 0 | 0 | 1 | 1 |
| 27 | ಗಣಕ ಯಂತ್ರ ನಿರ್ವಾಹಕರು | 2 | 0 | 0 | 02 | 2 | 0 |
| 28 | ಇ.ಸಿ.ಜಿ ತಂತ್ರಜ್ಞರು | 1 | 0 | 00 | 0 | 1 | 1 |
| 29 | ದ್ವಿ.ದ.ಸ. | 5 | 0 | 0 | 0 | 5 | 5 |
| 30 | ಬೆರಳಚ್ಚುಗಾರರು | 1 | 0 | 0 | 0 | 1 | 1 |
| 31 | ಎಂ.ಎಸ್.ಡಬ್ಲ್ಯೂ | 1 | 0 | 0 | 0 | 1 | 1 |
| 32 | ವಿದ್ಯುತ ಕರ್ಮಿ | 1 | 0 | 0 | 0 | 1 | 1 |
| | ಒಟ್ಟು:- | 158 | 56 | | 4 | | 98 |

ಮುಂದುವರೆದಿದೆ -3

| | ಗ್ರೂಪ್ "ಡಿ" | | | | | | |
|---|---|---|---|---|---|---|---|
| 1 | ವಾಹನ ಚಾಲಕರು | 5 | 1 | 0 | 4 | 5 | 0 |
| 2 | ಕುಕ್ ಕಂ ಕೇರ್ ಟೇಕರ್ | 2 | 0 | 0 | 2 | 2 | 0 |
| 3 | ಎಕ್ಸ್-ರೇ ಅಟೆಂಡರ್ | 2 | 0 | 0 | 2 | 2 | 0 |
| 4 | ಲ್ಯಾಬ್ ಅಟೆಂಡರ್ | 2 | 0 | 0 | 2 | 2 | 0 |
| 5 | ಅಟೆಂಡರ್ ಕಂ ಕ್ಲಿನರ್ | 2 | 0 | 0 | 2 | 2 | 0 |
| 6 | ಗ್ರೂಪ 'ಡಿ' | 98 | 17 | 0 | 81 | 98 | 0 |
| | ಒಟ್ಟು:- | 111 | 18 | 0 | 93 | 111 | 0 |

# ABSTRACT

| ಕ್ರಸಂ. | ವೃಂದವಾರು | ಮಂಜೂರಾತಿ | ಕಾರ್ಯನಿರತ | ಖಾಲಿ | ಷರಾ |
|---|---|---|---|---|---|
| 01. | ಗ್ರೂಪ್ "ಎ" | 33 | 31 | 02 | --- |
| 02. | ಗ್ರೂಪ್ "ಬಿ" | 03 | 01 | 02 | --- |
| 03. | ಗ್ರೂಪ್ "ಸಿ" | 158 | 60 | 98 | 04 ಜನ ಹೊರಗುತ್ತಿಗೆ |
| 04. | ಗ್ರೂಪ್ "ಡಿ" | 111 | 18 | 00 | 129 ಜನ ಹೊರಗುತ್ತಿಗೆ |
| | ಒಟ್ಟು | **305** | **110** | **195** | --- |

DIRECTOR
Bidar Institute of Medical Science
Bidar

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 490 |
| ಮಾನ್ಯ ಸದಸ್ಯರ ಹೆಸರು | ಶ್ರೀ ಈಶ್ವರ ಬಿ. ಖಂಡ್ರೆ (ಬಾಲ್ಕಿ) |
| ಉತ್ತರಿಸಬೇಕಾದ ದಿನಾಂಕ | 16/02/2023 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಲ್ಯಾಣ ಕರ್ನಾಟಕ ವಿಭಾಗದಲ್ಲಿ ಎಷ್ಟು ಸರ್ಕಾರಿ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಿವೆ; ಇವುಗಳನ್ನು ಯಾವಾಗ ಪ್ರಾರಂಭಿಸಲಾಗಿದೆ; ಹಾಗೂ ಈ ಸಂಸ್ಥೆಗಳಿಗೆ ಸರ್ಕಾರದಿಂದ ಎಷ್ಟು ಅನುದಾನ ಒದಗಿಸಲಾಗಿದೆ; (ಸಂಪೂರ್ಣ ವಿವರ ಒದಗಿಸುವುದು)</td><td>ಕಲ್ಯಾಣ ಕರ್ನಾಟಕ ಭಾಗದಲ್ಲಿ ಒಟ್ಟು 06 ಸರ್ಕಾರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಿರುತ್ತವೆ. ಇವುಗಳನ್ನು ಪ್ರಾರಂಭಿಸಲಾದ ವರ್ಷ ಹಾಗೂ ಈ ಸಂಸ್ಥೆಗಳಿಗೆ ಸರ್ಕಾರದಿಂದ ಬಿಡುಗಡೆ ಮಾಡಲಾದ ಅನುದಾನದ ವಿವರ ಈ ಕೆಳಕಂಡಂತಿರುತ್ತದೆ.
<table>
<tr><th>ಕ್ರ. ಸಂ</th><th>ಕಾಲೇಜುಗಳ ಹೆಸರು</th><th>ಪ್ರಾರಂಭವಾದ ವರ್ಷ</th><th>ಬಿಡುಗಡೆಯಾದ ಅನುದಾನ (ಲಕ್ಷಗಳಲ್ಲಿ)</th></tr>
<tr><td>1</td><td>ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ</td><td>1961</td><td>161313.75<br>(1997-98ನೇ ಸಾಲಿನಿಂದ)</td></tr>
<tr><td>2</td><td>ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್</td><td>2005-06</td><td>78102.72</td></tr>
<tr><td>3</td><td>ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು</td><td>2007</td><td>87700.00</td></tr>
<tr><td>4</td><td>ಗುಲ್ಬರ್ಗಾ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಗುಲ್ಬರ್ಗಾ</td><td>2013-14</td><td>77039.05</td></tr>
<tr><td>5</td><td>ಕೊಪ್ಪಳ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಕೊಪ್ಪಳ</td><td>2015</td><td>63220.78</td></tr>
<tr><td>6</td><td>ಯಾದಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಯಾದಗಿರಿ</td><td>2022-23</td><td>32500.00</td></tr>
</table></td></tr>
<tr><td>ಆ)</td><td>ಸದರಿ ಸರ್ಕಾರಿ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಲ್ಲಿ ಹೊಂದಿಕೊಂಡಂತೆ ಎಷ್ಟು ಹಾಸಿಗೆಯ ಆಸ್ಪತ್ರೆಗಳಿವೆ;</td><td rowspan="2">ಸದರಿ ಸರ್ಕಾರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಲ್ಲಿ ಹೊಂದಿಕೊಂಡಂತೆ ಇರುವ ಆಸ್ಪತ್ರೆಗಳ ಹಾಸಿಗೆ ಸಾಮರ್ಥ್ಯ ಹಾಗೂ ವಿದ್ಯಾರ್ಥಿಗಳ ಪ್ರವೇಶಮಿತಿಯನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ.</td></tr>
<tr><td>ಇ)</td><td>ಈ ಸಂಸ್ಥೆಗಳಲ್ಲಿ ಎಷ್ಟು ವೈದ್ಯ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸಿಕೊಡಲಾಗುತ್ತಿದೆ; (ವಿವರ ಒದಗಿಸುವುದು)</td></tr>
<tr><td>ಈ)</td><td>ಬೀದರ್‌ನ ಬ್ರಿಮ್ಸ್ ಸಂಸ್ಥೆಯನ್ನು ಯಾವಾಗ ಸ್ಥಾಪನೆ ಮಾಡಲಾಗಿದೆ; ಬ್ರಿಮ್ಸ್ ನಲ್ಲಿ ಕ್ಲಿನಿಕಲ್ ಮತ್ತು ನಾನ್ ಕ್ಲಿನಿಕಲ್ ಅಡಿಯಲ್ಲಿ ಪಿ.ಜಿ ಕೋರ್ಸ್ ಪ್ರಾರಂಭ ಮಾಡದೇ ಇರಲು ಕಾರಣವೇನು;</td><td>ಬೀದರ್ ಬ್ರಿಮ್ಸ್ ಸಂಸ್ಥೆಯಲ್ಲಿ ನಾನ್ ಕ್ಲಿನಿಕಲ್ ವಿಷಯಗಳಾದ ಅಂಗರಚನಶಾಸ್ತ್ರ ವಿಭಾಗ, ಶರೀರಕ್ರಿಯಾಶಾಸ್ತ್ರ ವಿಭಾಗ, ಜೀವರಸಾಯನಶಾಸ್ತ್ರ ವಿಭಾಗ, ಔಷಧಿಶಾಸ್ತ್ರ ವಿಭಾಗ ಹಾಗೂ ನ್ಯಾಯವೈದ್ಯಶಾಸ್ತ್ರ ವಿಭಾಗಗಳಲ್ಲಿ ತಲಾ 2 ಸೀಟುಗಳಂತೆ ಸ್ನಾತ್ತಕೋತ್ತರ ಕೋರ್ಸ್‌ಗಳನ್ನು ಪ್ರಾರಂಭಿಸಲಾಗಿರುತ್ತದೆ. ಇನ್ನುಳಿದ ನಾನ್ ಕ್ಲಿನಿಕಲ್ ವಿಭಾಗಗಳಲ್ಲಿ ಸ್ನಾತ್ತಕೋತ್ತರ ಕೋರ್ಸ್‌ಗಳನ್ನು ಪ್ರಾರಂಭಿಸಲು ಕ್ರಮ ವಹಿಸಲಾಗುವುದು.<br><br>ಮುಂದುವರೆದು, ಕ್ಲಿನಿಕಲ್ ವಿಭಾಗಕ್ಕೆ ಸಂಬಂಧಿಸಿದಂತೆ, ಉಳಿದ ವಿವಿಧ ವಿಭಾಗಗಳಲ್ಲಿಯೂ ಸಹ ಸ್ನಾತ್ತಕೋತ್ತರ ಕೋರ್ಸ್‌ಗಳನ್ನು ಪ್ರಾರಂಭಿಸಲು ಕ್ರಮ ವಹಿಸಲಾಗುವುದು.</td></tr>
<tr><td>ಉ)</td><td>ಸರ್ಕಾರದ ನಿರ್ಲಕ್ಷತನದಿಂದ ಪಿ.ಜಿ ಕೋರ್ಸ್ ಪ್ರಾರಂಭವಾಗದೇ ಇರುವುದು ಸರ್ಕಾರದ ಗಮನದಲ್ಲಿದೆಯೇ;</td><td rowspan="2">ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ 150 ಎಂ.ಬಿ.ಬಿ.ಎಸ್. ಪ್ರವೇಶಾತಿಯ ಅಂಗೀಕಾರಕ್ಕೆ ಸಂಬಂಧಿಸಿದಂತೆ ಎಂ.ಸಿ.ಐ. ಸಂಸ್ಥೆಯ ವಿರುದ್ಧ ಪ್ರಕರಣ ಸಂ: ಎಸ್. ಎಲ್. ಪಿ. ಸಂ: 19724/2019ಯು ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಬಾಕಿ ಇರುವ ಹಿನ್ನಲೆಯಲ್ಲಿ, ಕ್ಲಿನಿಕಲ್ ವಿಭಾಗಕ್ಕೆ ಸಂಬಂಧಿಸಿದಂತೆ, ಉಳಿದ ವಿವಿಧ ವಿಭಾಗಗಳಲ್ಲಿ ಹಾಗೂ ಇತರ ನಾನ್ ಕ್ಲಿನಿಕಲ್ ವಿಭಾಗಗಳಲ್ಲಿ ಸ್ನಾತಕೋತ್ತರ ಕೋರ್ಸುಗಳನ್ನು ಪ್ರಾರಂಭಿಸಲು ಅರ್ಜಿ ಸಲ್ಲಿಸಲಾಗಿರುವುದಿಲ್ಲ.</td></tr>
<tr><td>ಊ)</td><td>ಹಾಗಿದ್ದಲ್ಲಿ ಸ್ನಾತಕೋತ್ತರ ಕೋರ್ಸ್ ಗಳನ್ನು ಪ್ರಾರಂಭಿಸಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಿದೆ? (ಮಾಹಿತಿ ನೀಡುವುದು)</td></tr>
</table>

ಕಡತ ಸಂ: ಎಂಇಡಿ 94 ಎಂ ಎಸ್ ಎಫ್ 2023

(ಡಾ|| ಕೆ. ಸುಧಾಕರ್)
ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ
ಶಿಕ್ಷಣ ಸಚಿವರು.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 491 |
| ಸದಸ್ಯರ ಹೆಸರು | : | ಶ್ರೀ ಈಶ್ವರ್.ಬಿ.ಖಂಡ್ರೆ (ಭಾಲ್ಕಿ) |
| ಉತ್ತರಿಸಬೇಕಾದ ದಿನಾಂಕ | : | 16-02-2023 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರ ಪಂಪ್ ಸೆಟ್ ಗಳಿಗೆ ಮತ್ತು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಗೃಹ ಬಳಕೆಗೆ ಎಷ್ಟು ಗಂಟೆಗಳ ಕಾಲ ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ; | ಸರ್ಕಾರದ ಆದೇಶದಂತೆ ರಾಜ್ಯದ ರೈತರ ಕೃಷಿ ಪಂಪ್ ಸೆಟ್ಟುಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ.<br><br>ರಾಜ್ಯದಲ್ಲಿನ ನಗರ/ಪಟ್ಟಣ ಪ್ರದೇಶಗಳಲ್ಲಿ 24 ಗಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ನಿರಂತರ ಜ್ಯೋತಿ ಯೋಜನೆ ಅನುಷ್ಠಾನಗೊಂಡ ಗ್ರಾಮೀಣ ಪ್ರದೇಶಗಳಲ್ಲಿ ಗೃಹ ಬಳಕೆಗೆ 22 ರಿಂದ 24 ಗಂಟೆಗಳ ಕಾಲ ನಿರಂತರ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಕೃಷಿಯೇತರ ಸ್ಥಾವರಗಳಿರುವ (ಗೃಹ ಬಳಕೆ, ಇತರೆ) ಕೃಷಿ ಫೀಡರ್ ಗಳಿಗೆ ಪ್ರತಿ ದಿನ 7 ಗಂಟೆಗಳ ಕಾಲ 3-ಫೇಸ್ ವಿದ್ಯುತ್ ಪೂರೈಕೆ ಜೊತೆಗೆ ಸಿಂಗಲ್ ಫೇಸ್ ವಿದ್ಯುತ್ತನ್ನು ಸರಬರಾಜು ಮಾಡಲಾಗುತ್ತಿರುವ ಕಂಪನಿವಾರು ವಿವರಗಳು ಈ ಕೆಳಕಂಡಂತಿವೆ.<br><br>• **<u>ಬೆಸ್ಕಾಂ</u>**: ಬೆಸ್ಕಾಂ ವ್ಯಾಪ್ತಿಯಲ್ಲಿ 9 ಸಂಖ್ಯೆಗಿಂತ ಹೆಚ್ಚು ಕೃಷಿಯೇತರ ಸ್ಥಾವರಗಳಿರುವ ಕೃಷಿ ಫೀಡರ್ ಗಳಿಗೆ 6-8 ಗಂಟೆಗಳ ಕಾಲ ಸಿಂಗಲ್ ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br>• **<u>ಸೆಸ್ಕ</u> :** ಸೆಸ್ಕ ವ್ಯಾಪ್ತಿಯಲ್ಲಿ ಗ್ರಾಮೀಣ ಮತ್ತು ಐ.ಪಿ. ಸ್ಥಾವರಗಳನ್ನು ಹೊಂದಿರುವ (Un-bifurcated) 11 ಕೆ.ವಿ.ಮಾರ್ಗಗಳಿಗೆ ಒಟ್ಟು 9 ಗಂಟೆಗಳ ಕಾಲ ಸಿಂಗಲ್ ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br>• **<u>ಹೆಸ್ಕಾಂ</u>:** ಹೆಸ್ಕಾಂ ವ್ಯಾಪ್ತಿಯಲ್ಲಿನ ತೋಟದ ಮನೆ ಇರುವ ಕೃಷಿ ಪಂಪ್‌ಸೆಟ್ ಫೀಡರ್‌ಗಳಿಗೆ ಸಂಜೆ 6 ಗಂಟೆಯಿಂದ ಬೆಳಿಗ್ಗೆ 6 ಗಂಟೆಯವರೆಗೆ ಸಿಂಗಲ್ ಫೇಸ್ (ಓಪನ್ ಡೆಲ್ಟಾ) ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ.<br>• **<u>ಜೆಸ್ಕಾಂ</u>** : ಜೆಸ್ಕಾಂ ವ್ಯಾಪ್ತಿಯಲ್ಲಿ 14 ಮಿಶ್ರ ಲೋಡ್ ಫೀಡರ್ ಗಳಿಗೆ ರಾತ್ರಿ ವೇಳೆ 9 ಗಂಟೆಗಳ ಕಾಲ ಸಿಂಗಲ್ ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |

| ಆ) | ದಿನದ 7 ಗಂಟೆ ಮೂರು ಫೇಸ್ ಮತ್ತು 22 ಗಂಟೆಗಳ ಕಾಲ ಸಿಂಗಲ್ ಫೇಸ್ ವಿದ್ಯುತ್ ಪೂರೈಕೆ ಮಾಡಲಾಗುವುದೆಂದು ಸರ್ಕಾರ ಘೋಷಿಸಿದ್ದರೂ ಸಹ ಕಲ್ಯಾಣ ಕರ್ನಾಟಕ ಭಾಗದಲ್ಲಿ ದಿನದಲ್ಲಿ 4 ಗಂಟೆಯೂ 3 ಫೇಸ್ ವಿದ್ಯುತ್, 10-12 ಗಂಟೆ ಸಿಂಗಲ್ ಫೇಸ್ ವಿದ್ಯುತ್ ಪೂರೈಕೆ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಲ್ಯಾಣ ಕರ್ನಾಟಕ ವ್ಯಾಪ್ತಿಯ ಗ್ರಾಮೀಣ ಪ್ರದೇಶದ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ, ಗ್ರಾಮೀಣ ಪ್ರದೇಶದಲ್ಲಿನ ಬೇರ್ಪಡಿಸದ 14 ಸಂಖ್ಯೆಯ ಮಿಶ್ರ ಲೋಡ್ ಫೀಡರ್ ಗಳಿಗೆ ಗೃಹ ಬಳಕೆಗೆ 9 ಗಂಟೆಗಳ ಕಾಲ ಸಿಂಗಲ್ ಫೇಸ್ ಮತ್ತು 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ನಿರಂತರ ಜ್ಯೋತಿ ಯೋಜನೆಯು ಅನುಷ್ಠಾನಗೊಂಡ ಗ್ರಾಮಗಳಿಗೆ ದಿನವಹಿ 22 ರಿಂದ 24 ಗಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
|---|---|---|
| ಇ) | ರಾಜ್ಯದಲ್ಲಿರುವ ವಿದ್ಯುತ್ ಸಮಸ್ಯೆ ಪರಿಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | ರಾಜ್ಯದಲ್ಲಿ ಪ್ರಸ್ತುತ ಬೇಡಿಕೆಗೆ ಸೀಮಿತವಾಗಿ ವಿದ್ಯುತ್ ಉತ್ಪಾದನೆಯನ್ನು ಮಾಡಲಾಗುತ್ತಿದ್ದು ಯಾವುದೇ ಕೊರತೆ ಇರುವುದಿಲ್ಲ. ಗುಣಮಟ್ಟದ ವಿದ್ಯುತ್ ಪೂರೈಕೆಗೆ ಕವಿಪ್ರನಿನಿ ವತಿಯಿಂದ 2022-23 ನೇ ಸಾಲಿನಲ್ಲಿ ಇಲ್ಲಿಯವರೆಗೆ 24 ಹೊಸ ಉಪಕೇಂದ್ರಗಳ ಸ್ಥಾಪನೆ, 1092.43 ಸ.ಕಿ.ಮೀ. ವಿದ್ಯುತ್ ಪ್ರಸರಣ ಮಾರ್ಗಗಳ ನಿರ್ಮಾಣ ಹಾಗೂ ಹಾಲಿ 166 ಉಪಕೇಂದ್ರಗಳ ಸಾಮರ್ಥ್ಯ ಹೆಚ್ಚಳ ಮಾಡಲಾಗಿದ್ದು ಇದೊಂದು ನಿರಂತರ ಪ್ರಕ್ರಿಯೆಯಾಗಿರುತ್ತದೆ. |

ಸಂಖ್ಯೆ :ಎನರ್ಜಿ 27 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 492 |
| ಸದಸ್ಯರ ಹೆಸರು | : | ಶ್ರೀ ಪ್ರಿಯಾಂಕ್ ಖರ್ಗೆ (ಚಿತ್ತಾಪುರ) |
| ಉತ್ತರಿಸಬೇಕಾದ ದಿನಾಂಕ | : | 16-02-2023 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

****

| ಪ್ರಶ್ನೆ | | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ರೈತರ ಪಂಪ್ ಸೆಟ್ ಗಳಿಗೆ ಪ್ರತಿ ದಿನ 10 ಗಂಟೆಗಳ ಕಾಲ ಮೂರು ಫೇಸ್ ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆಯೇ? (ಮಾಹಿತಿ ಒದಗಿಸುವುದು) | ಪ್ರಸ್ತುತ, ಸರ್ಕಾರದ ಆದೇಶದಂತೆ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ. |

ಸಂಖ್ಯೆ:ಎನರ್ಜಿ 28 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

## ಕರ್ನಾಟಕ ವಿಧಾನ ಸಭೆ

**01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 493**

**02. ಸದಸ್ಯರ ಹೆಸರು : ಶ್ರೀ ಪ್ರಿಯಾಂಕ ಎಂ.ಖರ್ಗೆ(ಚಿತ್ತಾಪುರ)**

**03. ಉತ್ತರಿಸುವ ದಿನಾಂಕ : 16-02-2023**

**04. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು**

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ಲವ್ ಜಿಹಾದ್ ಪದಕ್ಕೆ ಸರ್ಕಾರದಲ್ಲಿರುವ ವ್ಯಾಖ್ಯಾನ (Definition) ಯಾವುದು; (ಮಾಹಿತಿ ನೀಡುವುದು) | ಲವ್ ಜಿಹಾದ್ ಪದಕ್ಕೆ ನಿಖರವಾದ ವ್ಯಾಖ್ಯಾನ ಹಾಗೂ ಅಪರಾಧ ವರ್ಗೀಕರಣ ಇರುವುದಿಲ್ಲ. ಆದರೆ ಮದುವೆ ಆಮಿಷವೊಡ್ಡಿ ಮತಾಂತರಗೊಳಿಸಲು ಒತ್ತಾಯಿಸುವ ಸಂಬಂಧ ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ಅಧಿನಿಯಮ, 2022ರಡಿ ದಾಖಲಾದ ಪ್ರಕರಣಗಳ ವಿವರ ಈ ಕೆಳಕಂಡಂತಿದೆ. |
| ಆ | ಲವ್ ಜಿಹಾದ್‌ಗೆ ಸಂಬಂಧಿಸಿದಂತೆ ಎಷ್ಟು ಪ್ರಕರಣಗಳು ದಾಖಲಾಗಿವೆ; (ಜಿಲ್ಲಾವಾರು ಮಾಹಿತಿ ನೀಡುವುದು) | |

| ಕ್ರಸ | ಘಟಕ | ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | ಯಶವಂತಪುರ ಮೊ.ಸಂ. 329/2022 ಕಲಂ 5 ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ಅಧಿನಿಯಮ, 2022 |
| 2 | ಮಂಡ್ಯ | ನಾಗಮಂಗಲ ಟೌನ್ ಪೊ.ಠಾ. ಮೊ.ಸ 121/2022 U/S IPC 1860 U/s: 376(3), 354(D), 450, 506, PROTECTION OF CHILDREN FROM SEXUAL OFFENCES ACT 2012 U/s: 6, 12 INFORMATION TECHNOLOGY ACT 2000 U/s: 67(B) The Karnataka Protection of Right to Freedom of Religion Ordinance, 2022 U/s: 5 |
| 3 | ಚಿತ್ರದುರ್ಗ | ಕೋಟೆ ಪೊ.ಠಾ. ಮೊ.ಸಂ 137/2022 ಕಲಂ ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ಅಧಿನಿಯಮ, 2022 |

<table>
<tr>
<td>ಇ</td>
<td>ಈ ಪ್ರಕರಣದಲ್ಲಿ ಎಷ್ಟು ಜನ ಆರೋಪಿಗಳನ್ನು ಬಂಧಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)</td>
<td rowspan="2">ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ಅಧಿನಿಯಮ, 2022ರಡಿ ತಪ್ಪಿತಸ್ಥರ ವಿರುದ್ಧ ಪ್ರಕರಣವನ್ನು ದಾಖಲಿಸಲಾಗುತ್ತಿದೆ. ದಾಖಲಾದ ಪ್ರಕರಣಗಳಲ್ಲಿ ದಸ್ತಗಿರಿ ಮಾಡಲಾದ ಅಂಕಿ-ಅಂಶಗಳ ವಿವರ ಕೆಳಗಿನಂತಿದೆ.
<table>
<tr><th>ಕ್ರಸ</th><th>ಘಟಕ</th><th>ಬಂಧಿಸಲಾದವರ ಸಂಖ್ಯೆ</th></tr>
<tr><td>1</td><td>ಬೆಂಗಳೂರು ನಗರ</td><td>1</td></tr>
<tr><td>2</td><td>ಮಂಡ್ಯ</td><td>1</td></tr>
<tr><td>3</td><td>ಚಿತ್ರದುರ್ಗ</td><td>1</td></tr>
</table>
</td>
</tr>
<tr>
<td>ಈ</td>
<td>ಈ ಪ್ರಕರಣದಲ್ಲಿ ತಪ್ಪಿತಸ್ಥರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಜಿಲ್ಲಾವಾರು ಮಾಹಿತಿ ನೀಡುವುದು)</td>
</tr>
</table>

ಸಂಖ್ಯೆ: ಒಇ 65 ಎಸ್ ಎಸ್ ಟಿ 2023

(ಆರಗ ಜ್ಞಾನೇಂದ್ರ)
ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 494
2. ಮಾನ್ಯ ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಪ್ರಿಯಾಂಕ್ ಎಂ.ಖರ್ಗೆ (ಚಿತ್ತಾಪುರ)
3. ಉತ್ತರಿಸುವ ದಿನಾಂಕ : 16.02.2023
4. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಕರಣ ಸಂಖ್ಯೆ 91/2020 ಈ ಪ್ರಕರಣಕ್ಕೆ ಸಂಬಂಧಿಸಿದಂತೆ ತನಿಖೆಯು ಈಗ ಯಾವ ಹಂತದಲ್ಲಿದೆ; (ಸಂಪೂರ್ಣ ಮಾಹಿತಿ ಒದಗಿಸುವುದು) | ಈ ಪ್ರಕರಣದಲ್ಲಿ ಆರೋಪಿಗಳ ವಿರುದ್ಧ ದೋಷಾರೋಪಣೆ ಪಟ್ಟಿಯನ್ನು ಸಿದ್ಧಪಡಿಸಿ ಮಾನ್ಯ ಸಿ.ಸಿ.ಹೆಚ್ 33ನೇ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯದಲ್ಲಿ ಸದರಿ ಮೊಕದ್ದಮೆಯು ವಿಶೇಷ ಸಿ.ಸಿ.ನಂ:187/2022ರಲ್ಲಿ ದಾಖಲಾಗಿ, ವಿಚಾರಣೆ ಹಂತದಲ್ಲಿರುತ್ತದೆ. |
| ಆ) | ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಎಷ್ಟು ಮೊತ್ತದ ಮಾದಕ ವಸ್ತುಗಳನ್ನು ವಶಪಡಿಸಿಕೊಳ್ಳಲಾಗಿದೆ/ (ಮಾದಕ ವಸ್ತುಗಳ ಹೆಸರು ಸಮೇತ ವಿವರ ನೀಡುವುದು) | 500 ಗ್ರಾಂ ತೂಕದ ಹೈಡ್ರೋ ಗಾಂಜಾ (ಅಂದಾಜು ಮೌಲ್ಯ ರೂ. 15,000/- ರಿಂದ ರೂ. 20,000/-ರವರೆಗೆ) |
| ಇ) | ಸದರಿ ಪ್ರಕರಣದಲ್ಲಿ ಯಾವ ಯಾವ ಷರತ್ತುಗಳ ಮೇಲೆ ಆರೋಪಿಗಳಿಗೆ ಜಾಮೀನು ನೀಡಲಾಗಿದೆ; (ಮಾಹಿತಿ ನೀಡುವುದು) | ಈ ಪ್ರಕರಣದಲ್ಲಿ ಒಟ್ಟು 11 ಜನ ಆರೋಪಿಗಳನ್ನು ತನಿಖಾ ಕಾಲದಲ್ಲಿ ದಸ್ತಗಿರಿ ಮಾಡಿ, ತನಿಖೆ ಕೈಗೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ಮಾನ್ಯ ನ್ಯಾಯಾಲಯವು ನ್ಯಾಯಾಂಗ ಬಂಧನಕ್ಕೆ ಆದೇಶಿಸಲಾಗಿರುತ್ತದೆ. ನಂತರ ಆರೋಪಿಗಳಿಗೆ ಮಾನ್ಯ ನ್ಯಾಯಾಲಯವು ಷರತ್ತುಬದ್ಧ ಜಾಮೀನನ್ನು ಮಂಜೂರು ಮಾಡಿರುತ್ತದೆ. |
| ಈ) | ಜಾಮೀನು ಪಡೆದಿದ್ದರೆ, ಆರೋಪಿಗಳು ಷರತ್ತುಗಳನ್ನು ಪಾಲನೆ ಮಾಡುತ್ತಿದ್ದಾರೆಯೇ? (ಮಾಹಿತಿ ನೀಡುವುದು) | ತನಿಖಾ ಕಾಲದಲ್ಲಿ ಆರೋಪಿಗಳು ಜಾಮೀನು ಷರತ್ತುಗಳನ್ನು ಪಾಲಿಸುತ್ತಿರುತ್ತಾರೆ ಹಾಗೂ ಆರೋಪಿಗಳು ಮಾನ್ಯ ನ್ಯಾಯಾಲಯದ ನಿಬಂಧನೆಗಳಿಗೆ ಒಳಪಟ್ಟಿರುತ್ತಾರೆ. |

ಒಇ 7 ಪಿಎನ್‌ಡಿ 2023(ಇ)

(ಆರಗ ಜ್ಞಾನೇಂದ್ರ)
ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 497 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.(ಮಡಿಕೇರಿ) |
| ಉತ್ತರಿಸುವ ದಿನಾಂಕ | : | 16.02.2023 |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯ ಕುಶಾಲನಗರದಲ್ಲಿರುವ ಇಂಜಿನಿಯರಿಂಗ್ ಕಾಲೇಜಿನಲ್ಲಿ ಮಂಜೂರಾಗಿರುವ ಸಿಬ್ಬಂದಿಗಳ ಹುದ್ದೆ ಎಷ್ಟು ಹಾಗೂ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; | ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕುಶಾಲನಗರ, ಕೊಡಗು ಜಿಲ್ಲೆ ಈ ಸಂಸ್ಥೆಗೆ ಮಂಜೂರಾದ, ಭರ್ತಿಯಾದ ಮತ್ತು ಖಾಲಿ (ನಿವೃತ್ತಿ, ನಿಧನ, ರಾಜೀನಾಮೆ ಮತ್ತು ಇತರೆ ಕಾರಣಗಳಿಂದ ತೆರವಾಗಿರುವ) ಹುದ್ದೆಗಳ ವಿವರ ಕೆಳಕಂಡಂತೆ ಇರುತ್ತವೆ. |
| (ಆ) | ಖಾಲಿ ಇರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು; (ಪೂರ್ಣ ವಿವರ ನೀಡುವುದು). | |

| ಕ್ರ.ಸಂ | ವೃಂದ | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿ ಇರುವ ಹುದ್ದೆಗಳು |
|---|---|---|---|---|
| 1 | ಎ | 17 | 7 | 10 |
| 2 | ಬಿ | 36 | 16 | 20 |
| 3 | ಸಿ | 116 | 36 | 80 |
| 4 | ಡಿ | 37 | 0 | 37 |
| ಒಟ್ಟಾರೆ | | 206 | 59 | 147 |

ಖಾಲಿಯಿರುವ ಬೋಧಕ ಹುದ್ದೆಗಳೆದುರಾಗಿ ಬೋಧನಾ ಕಾರ್ಯಭಾರಕ್ಕನುಗುಣವಾಗಿ 17 ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಪಡೆದುಕೊಂಡು ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಗೆ ತೊಂದರೆಯಾಗದಂತೆ ಪಾಠಪ್ರವಚನಗಳನ್ನು ನಡೆಸಲಾಗುತ್ತಿದೆ ಹಾಗೂ ಖಾಲಿ ಇರುವ ಗ್ರೂಪ್-ಡಿ ಹುದ್ದೆಗಳ ಎದುರಾಗಿ 14 ಹುದ್ದೆಗಳನ್ನು ಹೊರಗುತ್ತಿಗೆ ಮೂಲಕ ಭರ್ತಿ ಮಾಡಲಾಗಿರುತ್ತದೆ.

ಪ್ರಸ್ತುತ ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಮಂಜೂರಾಗಿರುವ ಬೋಧಕ ಹುದ್ದೆಗಳನ್ನು ಎಐಸಿಟಿಇ ಮಾರ್ಗಸೂಚಿಗಳನ್ವಯ ಭರ್ತಿಮಾಡಬೇಕಾಗಿದ್ದು, ಅದರಂತೆ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಲು ಕ್ರಮವಹಿಸಲಾಗಿದ್ದು, ವೃಂದ ಮತ್ತು ನೇಮಕಾತಿ ನಿಯಮಗಳು ತಿದ್ದುಪಡಿ ಆದ ನಂತರದಲ್ಲಿ ಬೋಧಕ ಹುದ್ದೆಗಳನ್ನು ಭರ್ತಿ ಮಾಡಲು ನಿಯಮಾನುಸಾರ ಕ್ರಮವಹಿಸಲಾಗುವುದು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಇ) | ಮಾದಾಪುರದಲ್ಲಿ ಪ್ರಥಮ ದರ್ಜೆ ಕಾಲೇಜು ಮಂಜೂರಾತಿ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಬಂದಿದೆಯೇ; ಬಂದಿದ್ದಲ್ಲಿ ಯಾವಾಗ ಮಂಜೂರು ಮಾಡಲಾಗುವುದು; ಹಾಗೂ ವಿಳಂಬಕ್ಕೆ ಕಾರಣವೇನು? (ಪೂರ್ಣ ವಿವರ ನೀಡುವುದು). | ಬಂದಿದೆ.<br><br>ಮಾದಾಪುರ ಗ್ರಾಮದಿಂದ 28 ಕಿ.ಮೀ ಅಂತರದಲ್ಲಿ 03 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದು, ವಿವರ ಕೆಳಕಂಡಂತಿದೆ: |

| ಕ್ರ. ಸಂ | ಕಾಲೇಜಿನ ಹೆಸರು | ಸರ್ಕಾರಿ /ಖಾಸಗಿ ಅನುದಾನಿತ | ಅಂತರ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| 1 | ಬಿ.ಎಂ.ಶೆಟ್ಟಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊಣನೂರು | ಸರ್ಕಾರಿ | 15 ಕಿ.ಮೀ. | 612 |
| 2 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುಶಾಲನಗರ | ಸರ್ಕಾರಿ | 16.5 ಕಿ. ಮೀ. | 905 |
| 3 | ಬಿ ಟಿ ಚನ್ನಯ್ಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸೋಮವಾರಪೇಟೆ | ಸರ್ಕಾರಿ | 28 ಕಿ. ಮೀ. | 178 |

| | | |
|---|---|---|
| | | ಮೇಲ್ಕಂಡ ಕಾಲೇಜುಗಳಲ್ಲಿ ಮಾದಾಪುರ ಗ್ರಾಮದ ವಿದ್ಯಾರ್ಥಿಗಳು ವ್ಯಾಸಂಗ ಮಾಡಲು ಅವಕಾಶವಿರುತ್ತದೆ.<br><br>ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಬಲವರ್ಧನೆ ಮಾಡುವ ಉದ್ದೇಶಗಳನ್ನು ಸರ್ಕಾರ ಹೊಂದಿದ್ದು, ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಪ್ರಾರಂಭಿಸುವ ಉದ್ದೇಶ ಇರುವುದಿಲ್ಲ. |
| **(ಈ)** | ಕೊಡಗು ಜಿಲ್ಲೆಯಲ್ಲಿ ಸ್ಥಾಪನೆಯಾಗಿರುವ ಪ್ರತ್ಯೇಕ ವಿಶ್ವವಿದ್ಯಾನಿಲಯಕ್ಕೆ ಈ ವರೆವಿಗೂ ಉಪಕುಲಪತಿಯವರನ್ನು ನೇಮಿಸದಿರಲು ಕಾರಣವೇನು; ವಿಶ್ವವಿದ್ಯಾನಿಲಯದ ಸ್ಥಾಪನೆಗೆ ನಿಗದಿಪಡಿಸಿದ ಅನುದಾನವೆಷ್ಟು; ಆ ಪೈಕಿ ಬಿಡುಗಡೆಗೊಳಿಸಿದ ಅನುದಾನವೆಷ್ಟು? (ಪೂರ್ಣ ವಿವರ ನೀಡುವುದು) | 2022-23ನೇ ಸಾಲಿನ ಆಯವ್ಯಯ ಘೋಷಣೆಯಂತೆ ಕಾಲೇಜುಗಳ ಮೇಲ್ವಿಚಾರಣೆಯನ್ನು ಸುಧಾರಿಸಲು ರಾಜ್ಯದಲ್ಲಿ ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶಗಳಲ್ಲಿ 07 ವಿನೂತನ ಮಾದರಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲಾಗಿದ್ದು, ಅದರಲ್ಲಿ ಕೊಡಗು ವಿಶ್ವವಿದ್ಯಾಲಯವು ಒಂದಾಗಿರುತ್ತದೆ.<br><br>ಪ್ರಸ್ತುತ ಕೊಡಗು ವಿಶ್ವವಿದ್ಯಾಲಯಕ್ಕೆ ನೂತನ ಕುಲಪತಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ:ಇಡಿ 81 ಯುಎನ್ಇ 2022, ದಿನಾಂಕ:18/04/2022ರಲ್ಲಿ ನೂತನ ವಿಶ್ವವಿದ್ಯಾಲಯಗಳಿಗೆ ವಾರ್ಷಿಕ ತಲಾ ರೂ.2.00ಕೋಟಿಗಳ ಆವರ್ತಕ ವೆಚ್ಚ ಬಳಸಿ ಕಾರ್ಯನಿರ್ವಹಿಸಲು ಸೂಚಿಸಲಾಗಿದೆ.<br><br>ಮುಂದುವರೆದು, ರಾಜ್ಯದಲ್ಲಿ ಹೊಸದಾಗಿ ಪ್ರಾರಂಭಿಸಲಾಗಿರುವ 7 ವಿಶ್ವವಿದ್ಯಾಲಯಗಳಿಗೆ ನೂತನ ಕುಲಪತಿಗಳು ಕಾರ್ಯಭಾರವನ್ನು ವಹಿಸಿಕೊಂಡ ನಂತರ ಅಗತ್ಯ ವೇತನಕ್ಕಾಗಿ ಪ್ರಸ್ತಾವನೆ ಸಲ್ಲಿಸುವಂತೆ ಆರ್ಥಿಕ ಇಲಾಖೆ ದಿನಾಂಕ:6/2/2023ರ ಟಿಪ್ಪಣಿಯಲ್ಲಿ ತಿಳಿಸಿದೆ. |

**ಇಡಿ 52 ಟಿಇಸಿ 2023**

**(ಡಾ|| ಅಶ್ವತ್ಥನಾರಾಯಣ್.ಸಿ.ಎನ್)**
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಹಾಗೂ ಜೀವನೋಪಾಯ ಇಲಾಖೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 498 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ) |
| ಉತ್ತರಿಸುವ ದಿನಾಂಕ | : | 16.02.2023 |
| ಉತ್ತರಿಸುವ ಸಚಿವರು | : | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಲೋಪತಿ ಮಾದರಿಯಲ್ಲಿ ತಾಲ್ಲೂಕು ಹಾಗೂ ಜಿಲ್ಲಾ ಸರ್ಕಾರಿ ಆಯುಷ್ ಆಸ್ಪತ್ರೆಗಳಲ್ಲಿ ತಜ್ಞ ವೈದ್ಯರುಗಳ ಹುದ್ದೆ ಸೃಜನೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಆಯುಷ್ ಅಭಿಯಾನ ಯೋಜನೆಯಡಿಯಲ್ಲಿ ತಜ್ಞ ವೈದ್ಯರುಗಳ ಹುದ್ದೆಯು ಸಂಪೂರ್ಣವಾಗಿ ತಾತ್ಕಾಲಿಕ ಹುದ್ದೆಯಾಗಿರುತ್ತದೆ. ಸದರಿ ಯೋಜನೆಯು ಅಸ್ತಿತ್ವದಲ್ಲಿರುವವರೆಗೂ ಮಾತ್ರ ಈ ಹುದ್ದೆಗಳು ಚಾಲ್ತಿಯಲಿರುತ್ತದೆ. |
| ಆ) | ರಾಜ್ಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆಯುಷ್ ತಜ್ಞ ವೈದ್ಯರ ನೇಮಕಾತಿಗೆ ಸಂಬಂಧಿಸಿದಂತೆ ನೇಮಕಾತಿ ಮತ್ತು ಸೇವಾ ಷರತ್ತು ನಿಯಮಗಳನ್ನು ರೂಪಿಸಲಾಗಿದೆಯೇ; ರೂಪಿಸಿದ್ದಲ್ಲಿ, ನೇಮಕಾತಿ ಮತ್ತು ಸೇವಾ ನಿಯಮಾವಳಿಯ ಸಂಪೂರ್ಣ ವಿವರ ನೀಡುವುದು; | ರಾಷ್ಟ್ರೀಯ ಆಯುಷ್ ಅಭಿಯಾನದಡಿಯಲ್ಲಿ ತಜ್ಞ ವೈದ್ಯರನ್ನೊಳಗೊಂಡಂತೆ ಗುತ್ತಿಗೆ ನೌಕರರನ್ನು ನೇಮಕಾತಿ ಮಾಡಿಕೊಳ್ಳುವ ಕುರಿತು ಸುತ್ತೋಲೆ ಸಂಖ್ಯೆ: ಆಯುಷ್ /07/ಐಇಸಿ (3) 2015-16, ದಿನಾಂಕ: 21.08.2019 ರಲ್ಲಿನ ಮಾರ್ಗಸೂಚಿಗಳನ್ವಯ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ನೇಮಕಾತಿ ಮಾಡಿಕೊಳ್ಳಲಾಗುತ್ತದೆ. ಸಂಬಂಧಿತ ಮಾರ್ಗಸೂಚಿಯನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ. |
| ಇ) | ರಾಷ್ಟ್ರೀಯ ಆರೋಗ್ಯ ಅಭಿಯಾನ (ನ್ಯಾಷನಲ್ ಹೆಲ್ತ್ ಮಿಷನ್) ಅನುಷ್ಠಾನಗೊಳಿಸುವಲ್ಲಿ ಆಯುಷ್ ಇಲಾಖೆಯ ಪಾತ್ರವೇನು; | 1. ರಾಷ್ಟ್ರೀಯ ಆರೋಗ್ಯ ಅಭಿಯಾನ ಕಾರ್ಯಕ್ರಮದಡಿಯಲ್ಲಿ ಆಯುರ್ವೇದ, ಯುನಾನಿ ಮತ್ತು ಹೋಮಿಯೋಪತಿ ಔಷಧಿಗಳನ್ನು 24X7 ಪ್ರಾಥಮಿಕ ಆರೋಗ್ಯ ಕೇಂದ್ರ, ಸಮುದಾಯ ಆರೋಗ್ಯ ಕೇಂದ್ರ, ಸಾರ್ವಜನಿಕ ಆಸ್ಪತ್ರೆ ಮತ್ತು ಜಿಲ್ಲಾ ಆಸ್ಪತ್ರೆಗಳಿಗೆ ಸಾರ್ವಜನಿಕರ ಉಪಯೋಗಕ್ಕಾಗಿ ಸರಬರಾಜು |

| | | |
|---|---|---|
| | | ಮಾಡಲಾಗುತ್ತದೆ.<br>2. ಎನ್.ಹೆಚ್.ಎಂ. ಆಯುಷ್ ವೈದ್ಯರಿಗೆ ತಾಂತ್ರಿಕ ವಿಷಯದಲ್ಲಿ ತರಬೇತಿ ನೀಡಲಾಗುತ್ತದೆ.<br>3. ಆಯುರ್ವೇದ, ಯುನಾನಿ, ಹೋಮಿಯೋಪತಿ, ಯೋಗ ಮತ್ತು ಪ್ರಕೃತಿ ಚಿಕಿತ್ಸೆ ಪದ್ಧತಿಗಳ ಬಗ್ಗೆ ಜನಸಾಮಾನ್ಯರಲ್ಲಿ ತಿಳುವಳಿಕೆ ಮೂಡಿಸುವ ಸಲುವಾಗಿ ಬಸ್ಸಿನಲ್ಲಿ ಹಾಗೂ ರೇಡಿಯೋದಲ್ಲಿ ಜಾಹಿರಾತು ನೀಡಲಾಗುತ್ತದೆ.<br><br>ಈ ಎಲ್ಲಾ ವಿಷಯಗಳ ಬಗ್ಗೆ ಆಯುಷ್ ಇಲಾಖೆಯು ಸಮನ್ವಯ ಮಾಡುತ್ತದೆ. |
| ಈ) | ಗುತ್ತಿಗೆ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಆಯುಷ್ ತಜ್ಞ ವೈದ್ಯರಿಗೂ ಆಲೋಪತಿ ವೈದ್ಯರಿಗೂ ಒಂದೇ ಕೆಲಸ ಆಗಿದ್ದರೂ, ವೇತನದಲ್ಲಿ ತಾರತಮ್ಯ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಆದರೆ ರಾಷ್ಟ್ರೀಯ ಆಯುಷ್ ಅಭಿಯಾನದಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆಯುಷ್ ತಜ್ಞ ವೈದ್ಯರುಗಳು ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವುದರಿಂದ ಕೇಂದ್ರ ಸರ್ಕಾರದ ಅನುಮೋದನೆಯಂತೆ ವೇತನವನ್ನು ನೀಡಲಾಗುತ್ತಿದೆ. |
| ಉ) | ಬಂದಿದ್ದಲ್ಲಿ, ವೇತನ ನೀಡುವ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ?(ಪೂರ್ಣ ವಿವರ ನೀಡುವುದು) | |

**ಸಂಖ್ಯೆ: ಆಕುಕ 31 ಪಿಟಿಡಿ 2023**

**(ಡಾ|| ಕೆ.ಸುಧಾಕರ್)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 499
2. ಮಾನ್ಯ ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)
3. ಉತ್ತರಿಸುವ ದಿನಾಂಕ : 16.02.2023
4. ಉತ್ತರಿಸುವ ಸಚಿವರು : ಗೃಹ ಸಚಿವರು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕೊಡಗು ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಗಾಂಜಾ ಪ್ರಕರಣಗಳು ಪತ್ತೆಯಾಗಿವೆ; ಗಾಂಜಾ ಮಾರಾಟ ತಡೆಯಲು ಸರ್ಕಾರವು ತೆಗೆದುಕೊಂಡ ಕ್ರಮವೇನು; (ಪೂರ್ಣ ವಿವರ ನೀಡುವುದು)</td><td>ಕೊಡಗು ಜಿಲ್ಲೆಯಲ್ಲಿ 2020, 2021, 2022 ಮತ್ತು 2023 (ಜನವರಿ) ವರೆಗೆ ದಾಖಲಾಗಿರುವ ಗಾಂಜಾ, ಮಾದಕ ವಸ್ತು ಪ್ರಕರಣಗಳ ಮಾಹಿತಿಯನ್ನು ಹಾಗೂ ತೆಗೆದುಕೊಂಡ ಕ್ರಮಗಳ ಪೂರ್ಣ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.</td></tr>
<tr><td>ಆ)</td><td>ಕೊಡಗು ಜಿಲ್ಲೆಯಲ್ಲಿ ಎಷ್ಟು ಅಕ್ರಮ ಗೋ-ಸಾಗಾಟ ಪ್ರಕರಣಗಳು ದಾಖಲಾಗಿದೆ; ಗೋ-ಸಾಗಾಟಗಾರರ ಮೇಲೆ ಸರ್ಕಾರ ಏನು ಕ್ರಮ ಕೈಗೊಂಡಿದೆ; (ಪೂರ್ಣ ವಿವರ ನೀಡುವುದು)</td><td>ಕೊಡಗು ಜಿಲ್ಲೆಯಲ್ಲಿ ಅಕ್ರಮ ಗೋ-ಸಾಗಾಟ ಪ್ರಕರಣಗಳ ವರ್ಷವಾರು ಮಾಹಿತಿ ಈ ಕೆಳಗಿನಂತಿದೆ.<br><br><table><tr><th>ಕ್ರ ಸಂ</th><th>ವರ್ಷ</th><th>ದಾಖಲಾದ ಪ್ರಕರಣಗಳ ಸಂಖ್ಯೆ</th></tr><tr><td>1</td><td>2020</td><td>15</td></tr><tr><td>2</td><td>2021</td><td>10</td></tr><tr><td>3</td><td>2022</td><td>09</td></tr><tr><td></td><td>ಒಟ್ಟು</td><td>34</td></tr></table><br>ಗೋ-ಸಾಗಾಟಗಾರರ ಮೇಲೆ ಸರ್ಕಾರ ಕೈಗೊಂಡ ಕ್ರಮ:<br><br>1. ಕೊಡಗು ಜಿಲ್ಲೆಯಲ್ಲಿ ಗೋ ಸಾಗಾಟಗಾರರ ಮೇಲೆ ಪ್ರಕರಣ ದಾಖಲಿಸಿ ಆರೋಪಿಗಳನ್ನು ದಸ್ತಗಿರಿ ಮಾಡಿ ಆರೋಪಿತರ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪತ್ರ ಸಲ್ಲಿಸಲಾಗುತ್ತಿದೆ.<br>2. ಪದೇ ಪದೇ ಕೃತ್ಯವನ್ನೆಸಗುವವರ ಮೇಲೆ ರೌಡಿ ಹಾಳೆಯನ್ನು ತೆರೆದು ಅವರ ಚಲನವಲನದ ಮೇಲೆ ನಿಗಾ ಇರಿಸಲಾಗುತ್ತಿದೆ.<br>3. ಚೆಕ್‌ಪೋಸ್ಟ್‌ಗಳಲ್ಲಿ ಪ್ರತಿ ದಿನ 24 ಗಂಟೆಗಳ ಕಾಲ ಕರ್ತವ್ಯಕ್ಕೆ ಸಿಬ್ಬಂದಿಯವರನ್ನು ನೇಮಿಸಿ ಚೆಕ್ ಪೋಸ್ಟ್ ಮೂಲಕ ಹಾದು ಹೋಗುವ ವಾಹನಗಳನ್ನು ಪರಿಶೀಲಿಸಿ ಅಕ್ರಮ ಗೋ ಸಾಗಾಟವನ್ನು ತಡೆಗಟ್ಟಲು ಕ್ರಮ ಕೈಗೊಳ್ಳಲಾಗುತ್ತಿದೆ.<br>4. ಗ್ರಾಮ ಗಸ್ತು ಕರ್ತವ್ಯಕ್ಕೆ ತೆರಳುವ ಸಿಬ್ಬಂದಿ, ಗುಪ್ತ ಕರ್ತವ್ಯದ ಸಿಬ್ಬಂದಿ ಹಾಗೂ ಅಪರಾಧ ಪತ್ತೆ ಕರ್ತವ್ಯದ ಸಿಬ್ಬಂದಿಯವರಿಗೆ</td></tr>
</table>

<table>
<tr><td></td><td></td><td>ಠಾಣಾ ವ್ಯಾಪ್ತಿಯಲ್ಲಿ ಅಕ್ರಮ ಗೋ ಸಾಗಾಟ, ಗೋ ಹತ್ಯೆ, ಗೋ ಮಾಂಸ ಮಾರಾಟ ಇತ್ಯಾದಿಗಳು ನಡೆಯುತ್ತಿರುವ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ ಸೂಚನೆಗಳನ್ನು ನೀಡಲಾಗುತ್ತಿದೆ.<br>5. ಠಾಣೆ ಹಾಗೂ ಗ್ರಾಮಗಳಲ್ಲಿ ನಡೆಸುವ ಸಾರ್ವಜನಿಕ ಸಭೆಗಳಲ್ಲಿ ಅಕ್ರಮ ಗೋ ಸಾಗಾಟ, ಗೋ ಹತ್ಯೆ, ಗೋ ಮಾಂಸ ಮಾರಾಟ ಇತ್ಯಾದಿಗಳ ಬಗ್ಗೆ ಮಾಹಿತಿ ನೀಡುವಂತೆ ಸಾರ್ವಜನಿಕರಿಗೆ ತಿಳುವಳಿಕೆ ನೀಡಲಾಗುತ್ತಿದೆ.</td></tr>
<tr><td>ಇ)</td><td>ಕಳೆದ ಮೂರು ವರ್ಷಗಳಿಂದ ಕೊಡಗು ಜಿಲ್ಲೆಯಲ್ಲಿ ಎಷ್ಟು ಮತಾಂತರ ಪ್ರಕರಣಗಳು ದಾಖಲಾಗಿದೆ; ಮತಾಂತರ ತಡೆಗಟ್ಟಲು ಸರ್ಕಾರವು ತೆಗೆದುಕೊಂಡ ಕ್ರಮವೇನು?</td><td>ಕಳೆದ 3 ವರ್ಷಗಳಿಂದ ಕೊಡಗು ಜಿಲ್ಲೆಯಲ್ಲಿ ದಾಖಲಾಗಿರುವ ಮತಾಂತರ ಪ್ರಕರಣಗಳ ಮಾಹಿತಿ ಈ ಕೆಳಗಿನಂತಿದೆ<br><br>ಕ್ರಸ | ವರ್ಷ | ದಾಖಲಾದ ಪ್ರಕರಣಗಳ ಸಂಖ್ಯೆ<br>1 | 2020 | 1<br>2 | 2021 | 4<br>3 | 2022 | 3<br>4 | 2023 | 2<br> | ಒಟ್ಟು | 10<br><br>ಮತಾಂತರಗೊಳಿಸುತ್ತಿರುವುದನ್ನು ನಿಯಂತ್ರಿಸಲು ಈ ಕುರಿತು ಈ ಕೆಳಗಿನಂತೆ ಮುಂಜಾಗ್ರತಾ ಕ್ರಮ ಕೈಗೊಳ್ಳಲಾಗಿದೆ:<br>➢ ಠಾಣಾ ವ್ಯಾಪ್ತಿಯಲ್ಲಿ ಶಾಂತಿ ಸಭೆ, ಯುವಜನ ಸಭೆ, ಮೊಹಲ್ಲ ಮೀಟಿಂಗ್, ನಾಗರೀಕ ಸಮಿತಿ ಸಭೆಗಳನ್ನು ನಡೆಸಿ ಸಾರ್ವಜನಿಕರಿಗೆ ಮತ್ತು ಯುವಕರಿಗೆ ತಿಳುವಳಿಕೆಗಳನ್ನು ನೀಡಲಾಗುತ್ತಿದೆ ಹಾಗೂ ವೃತ್ತ ಉಪ ವಿಭಾಗ, ಜಿಲ್ಲಾ ಮಟ್ಟದಲ್ಲಿಯೂ ಸಹ ಸಭೆಗಳನ್ನು ಕೈಗೊಳ್ಳಲಾಗುತ್ತಿದೆ.<br>➢ ಪ್ರತಿ ಠಾಣಾ ವ್ಯಾಪ್ತಿಯಲ್ಲಿ ಗಸ್ತು 112 ಹೊಯ್ಸಳ ವಾಹನದಲ್ಲಿ ದಿನದ 24 ಗಂಟೆಯೂ ಅಧಿಕಾರಿ, ಸಿಬ್ಬಂದಿಯವರು ಗಸ್ತು ಕರ್ತವ್ಯದಲ್ಲಿ ನಿರತರಾಗಿದ್ದಾರೆ.<br>➢ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ತರುವ ವ್ಯಕ್ತಿಗಳು/ ಸಂಘಟನೆಗಳು/ಸಾಮಾಜಿಕ ಜಾಲತಾಣಗಳ ಬಗ್ಗೆ ಸತತ ನಿಗಾ ಇಡಲಾಗಿದೆ.<br>➢ ಠಾಣಾ ವ್ಯಾಪ್ತಿಯಲ್ಲಿ ರಾತ್ರಿ ಬೀಟ್ ಮತ್ತು ಶುಭೋದಯ (ಗುಡ್ ಮಾರ್ನಿಂಗ್) ಬೀಟುಗಳನ್ನು ಕೈಗೊಳ್ಳಲಾಗಿದೆ. ಏಕ ಕಾಲದಲ್ಲಿ ಜಿಲ್ಲಾ ವ್ಯಾಪ್ತಿಯಲ್ಲಿ ಕ್ಷಿಪ್ರ ವಾಹನ ತಪಾಸಣೆಗಳನ್ನು ಕೈಗೊಳ್ಳಲಾಗುತ್ತಿದೆ.<br>➢ ಮತೀಯ ಗೂಂಡಾಗಳು ಕಂಡುಬಂದಲ್ಲಿ ಆರೋಪಿಗಳನ್ನು</td></tr>
</table>

| | | |
|---|---|---|
| | | ಗುರುತಿಸಿ ರೌಡಿ ಪಟ್ಟಿಯನ್ನು ದಾಖಲಿಸಿ, ಸದರಿಯವರನ್ನು ಗಡಿಪಾರು ಮಾಡಲಾಗಿರುತ್ತದೆ.<br>➢ ಹಬ್ಬ-ಹರಿದಿನಗಳಲ್ಲಿ ಎಲ್ಲಾ ಕೋಮಿನ ಮುಖಂಡರನ್ನು ಸೇರಿಸಿ ಶಾಂತಿ ಸಭೆ, ಮೋಹಲ್ಲಾ ಮೀಟಿಂಗ್, ಯುವಕರ ಸಭೆ ಹಾಗೂ ಸಾರ್ವಜನಿಕರಿಗೆ ಸೂಕ್ತ ತಿಳುವಳಿಕೆ ನೀಡುತ್ತಾ ಕಾನೂನಿನ ಅರಿವು ಮೂಡಿಸಲಾಗುತ್ತಿದೆ. |

ಒಇ 6 ಪಿಎನ್‌ಡಿ 2023(ಇ)

(ಆರಗ ಜ್ಞಾನೇಂದ್ರ)
ಗೃಹ ಸಚಿವರು

## ಅನುಬಂಧ

**ಕೊಡಗು ಜಿಲ್ಲೆಯಲ್ಲಿ ಕಳೆದ 2020, 2021, 2022 ಮತ್ತು 2023 (ಜನವರಿವರೆಗೆ) ದಾಖಲಾದ ಪ್ರಕರಣಗಳ ಹಾಗು ಅವುಗಳ ಪ್ರಸ್ತುತ ಹಂತದ ಮಾಹಿತಿ, ವಶಪಡಿಸಿಕೊಂಡ ಮಾದಕ ವಸ್ತುಗಳು ಮತ್ತು ವಶಪಡಿಸಿಕೊಂಡ ಮಾದಕ ವಸ್ತುಗಳ ಮೌಲ್ಯದ ವಿವರಗಳನ್ನು ಈ ಕೆಳಕಂಡಂತೆ ಒದಗಿಸಲಾಗಿದೆ.**

| Year | Rep | UI | PT | Con | No. of Accused | Seizure KGS | Value of Drug Seized (Rs.) |
|---|---|---|---|---|---|---|---|
| 2020 | 30 | 0 | 28 | 2 | 81 | 1. 49 K.G 1.13 Gram Ganja<br>2. 290 Gram Ampetamine | 1) 10,25,860/-<br>2) 2,32,000/- |
| 2021 | 17 | 0 | 17 | 0 | 36 | **1. 15 kg 216 gram Ganja plants**<br>**2.** 7 K.G. 319 Gram Ganja<br>**3.** 11 Gram 790 ml Ampetamine<br>**4.** ECSTASY (Tablet) – 0.800 ml gram | 1) 1,93,500/-<br>2) 3,74,500/-<br>3) 45,000/-<br>4) 1,000/- |
| 2022 | 21 | 4 | 16 | 1 | 49 | 1. **960 gram Ganja plants**<br>2. 23 KG 66Gram 50 Mili Ganja<br>3. 15. 50 Gram . MDMA Crystal<br>4. 1 KG 160 Gram Hash oil | 1) 2,500/-<br>2) 4,34,200/-<br>3) 38,750/-<br>4) 11,00,000/- |
| **2023** ( Up to January) | 3 | 3 | 0 | 0 | 6 | 1. **200 gram Ganja** | 1) 22,500/- |

**ಗಾಂಜಾ ಮಾರಾಟ/ಮಾದಕ ವಸ್ತುಗಳ ಮಾರಾಟ ತಡೆಯಲು ತೆಗೆದುಕೊಂಡ ಕ್ರಮಗಳು:**

- ಕೊಡಗು ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಮಾದಕ ದ್ರವ್ಯ ಸಮನ್ವಯ ಕೇಂದ್ರ (NCORD) ಸಮಿತಿಯನ್ನು ರಚಿಸಲಾಗಿದ್ದು, ಸದರಿ ಸಮಿತಿಯಲ್ಲಿ ಪೊಲೀಸ್ ಇಲಾಖೆ, ಶಿಕ್ಷಣ ಇಲಾಖೆ, ಆರೋಗ್ಯ ಇಲಾಖೆ, ಕೃಷಿ ಇಲಾಖೆ, ಅರಣ್ಯ ಇಲಾಖೆ, ರೆವಿನ್ಯೂ ಇಲಾಖೆ ಮತ್ತು ಇತರೇ ಇಲಾಖೆಗಳ ಅಧಿಕಾರಿಗಳು ಸದಸ್ಯರುಗಳಾಗಿದ್ದು, ದಿನಾಂಕ 14/12/2022 ರಂದು ಜಿಲ್ಲಾ ಮಟ್ಟದ ಮಾದಕ ದ್ರವ್ಯ ಸಮಿತಿಯನ್ನು ರಚಿಸಿ, ಮಾದಕ ವಸ್ತುಗಳ ಮಾರಾಟ ಸಾಗಾಟ ಹಾಗೂ ಬೆಳೆಯುವಿಕೆಯ ಬಗ್ಗೆ ಮಾಹಿತಿ ಸಂಗ್ರಹಿಸುವಲ್ಲಿ ಮೇಲ್ಕಂಡ ಎಲ್ಲಾ ಇಲಾಖೆಯವರು ಪೊಲೀಸ್ ಇಲಾಖೆಯೊಂದಿಗೆ ಸಹಕರಿಸಿ ಮಾದಕ ವಸ್ತುಗಳ ಬಳಕೆಯನ್ನು ತಡೆಗಟ್ಟಲು ತೀರ್ಮಾನಿಸಲಾಗಿರುತ್ತದೆ.

- ಜಿಲ್ಲೆಯಲ್ಲಿ ಅಂತರರಾಜ್ಯ ಹಾಗೂ ಅಂತರ ಜಿಲ್ಲೆ ಗಡಿಗಳಲ್ಲಿ ಚೆಕ್‌ಪೋಸ್ಟ್‌ಗಳನ್ನು ತೆರೆದಿದ್ದು, ಅಲ್ಲಿ ಸಿಸಿ ಕ್ಯಾಮೆರಾಗಳನ್ನು ಅಳವಡಿಸಿದ್ದು ಹಾಗೂ ಮಾದಕ ದ್ರವ್ಯ ವಸ್ತುಗಳನ್ನು ಸಾಗಿಸುವುದು ಕಾನೂನು ಬಾಹಿರ ಎಂಬ ಬಗ್ಗೆ ಬೋರ್ಡ್‌ಗಳನ್ನು ಅಳವಡಿಸಲಾಗಿದೆ ಹಾಗೂ ಪೊಲೀಸ್ ಸಿಬ್ಬಂದಿಗಳನ್ನು ನೇಮಕ ಮಾಡಿ, ಹೊರ ರಾಜ್ಯ ಹಾಗೂ ಹೊರ ಜಿಲ್ಲೆಗಳಿಂದ ಬರುವ ಎಲ್ಲಾ ವಾಹನಗಳನ್ನು ಹಾಗೂ ಸಂಶಯಾಸ್ಪದ ವ್ಯಕ್ತಿಗಳನ್ನು ಪರಿಶೀಲಿಸಲಾಗುತ್ತಿದೆ.
- ಠಾಣಾ ಮಟ್ಟದಲ್ಲಿ ಮಾದಕ ದ್ರವ್ಯ ಹಾಗೂ ವಸ್ತುಗಳ ಮಾರಾಟದ ಜಾಲದ ಬಗ್ಗೆ ಮಾಹಿತಿ ಪಡೆಯಲು ಬೀಟ್ ಸಿಬ್ಬಂದಿಗಳನ್ನು ನೇಮಿಸುತ್ತಿದ್ದು. ಸದರಿ ಬೀಟ್ ಸಿಬ್ಬಂದಿಗಳನ್ನು ತಮ್ಮ ಬೀಟ್ ವ್ಯಾಪ್ತಿಯಲ್ಲಿ ಬೀಟ್ ಸದಸ್ಯರನ್ನು ಭೇಟಿ ಮಾಡಿ ಹಾಗೂ ಬೀಟ್ ಸಭೆಗಳನ್ನು ನಡೆಸಿ ಮಾದಕ ವಸ್ತುಗಳ ಸೇವನೆ ಹಾಗೂ ಮಾರಾಟದ ಬಗ್ಗೆ ಮಾಹಿತಿ ಪಡೆಯುತ್ತಿರುತ್ತಾರೆ ಹಾಗೂ ತಮ್ಮ ಬೀಟ್ ಸಭೆಯಲ್ಲಿ ಮಾದಕ ವಸ್ತು ಸೇವನೆಯಿಂದ ಆಗುವ ದುಷ್ಪರಿಣಾಮಗಳ ಹಾಗೂ ಮಾರಾಟ ಮಾಡಿದರೆ ಅದರ ಪರಿಣಾಮಗಳ ಬಗ್ಗೆ ಇರುವ ಶಿಕ್ಷೆಯ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.
- ಠಾಣೆಯಲ್ಲಿ ಪ್ರತಿ ವಾರ ನಾಗರೀಕ ಸಮಿತಿ ಸಭೆ ಹಾಗೂ ಯೂತ್ ಕಮಿಟಿ ಸಭೆ ಮಾಡುತ್ತಿದ್ದು, ಸದರಿ ಸಭೆಯಲ್ಲಿ ಮಾದಕ ವಸ್ತುಗಳ ಸೇವನೆ ಹಾಗೂ ಮಾರಾಟ ಮಾಡುವವರ ಬಗ್ಗೆ ಮಾಹಿತಿ ನೀಡುವಂತೆ ತಿಳುವಳಿಕೆ ನೀಡಲಾಗುತ್ತಿದೆ.
- ಠಾಣಾ ವ್ಯಾಪ್ತಿಯಲ್ಲಿ ಬರುವ ಶಾಲಾ/ಕಾಲೇಜುಗಳಿಗೆ ಬೇಟಿ ನೀಡಿ ವಿಧ್ಯಾರ್ಥಿಗಳೊಂದಿಗೆ ಸಂವಾದ ನಡೆಸಿ ಮಾದಕ ವಸ್ತುಗಳ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸುವುದಲ್ಲದೆ ಅಂತಹವರ ಬಗ್ಗೆ ಮಾಹಿತಿ ನೀಡಲು ತಿಳುವಳಿಕೆ ನೀಡಲಾಗುತ್ತಿದೆ.
- ಜಿಲ್ಲೆಯಲ್ಲಿ ಆಗಿದ್ದಾಂಗ್ಗೆ ದಿಡೀರ್ ನಾಕಾಬಂದಿ ಮಾಡಿ ಹೊರ ರಾಜ್ಯ ಹಾಗೂ ಹೊರ ಜಿಲ್ಲೆಗಳಿಂದ ಬರುವ ಎಲ್ಲಾ ವಾಹನಗಳನ್ನು ಹಾಗೂ ಸಂಶಯಾಸ್ಪದ ವ್ಯಕ್ತಿಗಳನ್ನು ಪರಿಶೀಲಿಸಲಾಗುತ್ತಿದೆ.
- ಈಗಾಗಲೇ ಈ ಹಿಂದೆ ಎನ್.ಡಿ.ಪಿ.ಎಸ್. ಕಾಯ್ದೆಯಲ್ಲಿ ದಾಖಲಾಗಿರುವ ಪ್ರಕರಣಗಳ ಆರೋಪಿಗಳನ್ನು ಆಗಿದ್ದಾಂಗೆ ಪರಿಶೀಲಿಸಿ ಅವರ ಚಲನವಲನ ಹಾಗೂ ವ್ಯವಹಾರಗಳ ಬಗ್ಗೆ ನಿಗಾ ವಹಿಸಲಾಗುತ್ತಿದೆ.
- ಠಾಣಾ ವ್ಯಾಪ್ತಿಯಲ್ಲಿ ಆಟೋ ಚಾಲಕರು, ಕ್ಯಾಬ್ ಚಾಲಕರ ಸಭೆ ಕರೆದು ಸಭೆಯಲ್ಲಿ ಅವರಿಗೆ ಯಾರಾದರೂ ಗಾಂಜಾ ಸೇವನೆ, ಮಾರಾಟ ಹಾಗೂ ಸಾಗಾಟ ಮಾಡುತ್ತಿದ್ದಾರೆಯೇ ಈ ಬಗ್ಗೆ ಠಾಣೆಗೆ ಮಾಹಿತಿ ನೀಡುವಂತೆ ತಿಳುವಳಿಕೆ ನೀಡಲಾಗುತ್ತಿರುತ್ತದೆ.
- ಜಿಲ್ಲೆಯಲ್ಲಿ ಮಾದಕ ವಸ್ತುಗಳ ಸೇವನೆ, ಮಾರಾಟ, ಸಾಗಾಟಕ್ಕೆ ಸಂಬಂದಿಸಿದಂತೆ ಹೆಚ್ಚು ಹೆಚ್ಚು ಎನ್.ಡಿ.ಪಿ.ಎಸ್. ಕಾಯ್ದೆಯಡಿ ಪ್ರಕರಣಗಳನ್ನು ದಾಖಲಿಸಿ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.
- ಕೊಡಗು ಜಿಲ್ಲೆಯಲ್ಲಿ ಗಾಂಜಾ ಮಾರಾಟ ಮಾಡುವವರು ಮತ್ತು ಗಾಂಜಾ ಬೆಳೆಯುವವರನ್ನು ಪತ್ತೆ ಮಾಡುವ ಬಗ್ಗೆ ಜಿಲ್ಲೆಯ ಎಲ್ಲಾ ಪೊಲೀಸ್ ಠಾಣೆಯ ನುರಿತ ಅಪರಾಧ ಸಿಬ್ಬಂದಿಗಳನ್ನು ನೇಮಿಸಿ ಪ್ರಕರಣಗಳನ್ನು ಪತ್ತೆ ಹಚ್ಚಲು ಹೆಚ್ಚಿನ ಮುತುವರ್ಜಿ ವಹಿಸಿ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.
- ಜಿಲ್ಲಾ ಮಟ್ಟದಲ್ಲಿ ನುರಿತ ಅಪರಾಧ ಪತ್ತೆ ಕರ್ತವ್ಯದ ಸಿಬ್ಬಂದಿಗಳ ತಂಡವನ್ನು ರೂಪಿಸಿಕೊಂಡು ಜಿಲ್ಲಾ ವ್ಯಾಪ್ತಿಯಲ್ಲಿ ನಡೆಯುವ ಅಕ್ರಮ ಗಾಂಜಾ ಮಾರಾಟ ಮತ್ತು ಗಾಂಜಾ ಬೆಳೆಯುವವರನ್ನು ಪತ್ತೆ ಮಾಡಿ ಪ್ರಕರಣ ದಾಖಲಿಸಿಕೊಂಡು ಕ್ರಮ ಕೈಗೊಳ್ಳಲಾಗುತ್ತಿದೆ.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 5
**ಸದಸ್ಯರ ಹೆಸರು** : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)
**ಉತ್ತರಿಸಬೇಕಾದ ದಿನಾಂಕ** : 16.02.2023
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಶಿಕ್ಷಕರ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ಎಷ್ಟು ಶಿಕ್ಷಕರ ಕೊರತೆಯಿದೆ; (ವಿಷಯವಾರು ವಿವರ ನೀಡುವುದು) | • **ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ** ಒಟ್ಟು 48,355 ಹುದ್ದೆಗಳು ಖಾಲಿ ಇರುತ್ತವೆ. (ವಿಷಯವಾರು ಪಟ್ಟಿ ಅನುಬಂಧ-1)<br>• **ರಾಜ್ಯದಲ್ಲಿ ಸರ್ಕಾರಿ ಪ್ರೌಢಶಾಲೆಗಳಲ್ಲಿ** ಒಟ್ಟು 10184 ಶಿಕ್ಷಕರ ಹುದ್ದೆಗಳು ಖಾಲಿ ಇರುತ್ತದೆ. (ವಿಷಯವಾರು ಪಟ್ಟಿ ಅನುಬಂಧ-2) |
| ಇ) | ಖಾಲಿಯಿರುವ ಶಿಕ್ಷಕರುಗಳು ಹುದ್ದೆಗಳ ನೇಮಕಾತಿಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | • ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ ಕೊರತೆಯನ್ನು ನೀಗಿಸಲು ಪ್ರಸ್ತುತ ಸಾಲಿನಲ್ಲಿ ಒಟ್ಟು 27000 ಅತಿಥಿ ಶಿಕ್ಷಕರ ನೇಮಕಾತಿ ಮಾಡಲಾಗಿದೆ.<br>• ಪದವೀಧರ ಪ್ರಾಥಮಿಕ ಶಿಕ್ಷಕರ (6 ರಿಂದ 8 ನೇ ತರಗತಿ) 15000 ಶಿಕ್ಷಕ ನೇಮಕಾತಿ ಪ್ರಕ್ರಿಯ ಅಂತಿಮ ಹಂತದಲ್ಲಿದೆ.<br>• ಪ್ರಸ್ತುತ ಸಾಲಿನಲ್ಲಿ ರಾಜ್ಯದ ಪ್ರೌಢಶಾಲೆಗಳಲ್ಲಿ ಖಾಲಿಯಿರುವ ಹುದ್ದೆಗಳಿಗೆ ಎದುರಾಗಿ ಒಟ್ಟು 5909 ಅತಿಥಿ ಶಿಕ್ಷಕರ ನೇಮಕಾತಿ ಮಾಡಲಾಗಿದೆ<br>• ಸರ್ಕಾರಿ ಪ್ರೌಢಶಾಲಾ ಶಿಕ್ಷಕರ ನೇಮಕಾತಿ ಕುರಿತು ಪ್ರಸ್ತುತ ಸಾಲಿನಲ್ಲಿ ಸರ್ಕಾರದ ಪತ್ರ ಸಂಖ್ಯೆ ಆಇ 454 ವೆಚ್ಚ-8/2022 ದಿನಾಂಕ: 03/09/2022 ರಲ್ಲಿ ದೈಹಿಕ ಶಿಕ್ಷಕರ ಹುದ್ದೆಗಳು 200 ಸೇರಿ ಒಟ್ಟು 2500 ಶಿಕ್ಷಕರುಗಳ ಹುದ್ದೆಗಳನ್ನು ಅನುಮತಿ ನೀಡಿರುವ 15000 ಜಿಪಿಎಸ್ ಟಿ ನೇಮಕಾತಿಯಲ್ಲಿ ಭರ್ತಿಯಾಗದೇ ಖಾಲಿ ಉಳಿದ ಹುದ್ದೆಗಳಿಗೆ ಹೊಂದಾಣಿಕೆ ಮಾಡಿಕೊಳ್ಳುವ ಷರತ್ತಿಗೊಳಪಟ್ಟು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಕ್ರಮವಹಿಸಲು ಆದೇಶಿಸಿದ. ಅದರಂತೆ ಕ್ರಮ ವಹಿಸಲಾಗುತ್ತಿದೆ. ಸದರಿ ಪಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| ಈ) | ಯಾವ ಕಾಲಮಿತಿಯಲ್ಲಿ ಶಿಕ್ಷಕರುಗಳ ನೇಮಕಾತಿ ಮಾಡಿಕೊಂಡು ವಿದ್ಯಾರ್ಥಿಗಳಿಗೆ ಅನುಕೂಲ ಕಲ್ಪಿಸಿಕೊಡಲಾಗುವುದು; | ಹಾಲಿ ಚಾಲ್ತಿಯಲ್ಲಿರುವ ಪದವೀಧರ ಪ್ರಾಥಮಿಕ ಶಿಕ್ಷಕರ ( 6 ರಿಂದ 8 ನೇ ತರಗತಿ), 15000 ಶಿಕ್ಷಕರ ನೇಮಕಾತಿ ಪಕ್ರಿಯ ಅಂತಿಮ ಹಂತದಲ್ಲಿದೆ, ಪ್ರಕ್ರಿಯೆ ಪೂರ್ಣಗೊಂಡ ಕೂಡಲೇ, ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ |

| | | |
|---|---|---|
| | | ನೀಡಿ ಶಾಲೆಗಳಿಗೆ ಸ್ಥಳ ನಿಯುಕ್ತಿಗೊಳಿಸಲು ಕ್ರಮವಹಿಸಲಾಗುವುದು. |
| ಊ) | ಇಲ್ಲದಿದ್ದಲ್ಲಿ, ಕಾರಣಗಳೇನು ? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

**ಸಂಖ್ಯೆ: ಇಪಿ 05 ಪಿಎಂಎ 2023**

**(ಬಿ.ಸಿ. ನಾಗೇಶ್)**
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ**
**ಸಕಾಲ ಸಚಿವರು**

# GOVERNMENT OF KARNATAKA

## DEPARTMENT OF PUBLIC INSTRUCTIONS

Office of Commissioner for Public Instructions, Bengaluru

Vacancies Available(Primary)

| | SRHM | HM | PE | SPECIAL | GPT | PST | Total |
|---|---|---|---|---|---|---|---|
| DISTRICT NAME | Vacancy | Vacancy | Vacancy | Vacancy | Vacancy | Vacancy | Total |
| BAGALKOT Total | 125 | 156 | 134 | 0 | 1012 | 579 | 2006 |
| BALLARI Total | 104 | 99 | 102 | 8 | 552 | 841 | 1706 |
| BELAGAVI Total | 89 | 124 | 69 | 1 | 1109 | 952 | 2344 |
| BELAGAVI CHIKKODI Total | 126 | 167 | 106 | 2 | 1380 | 1591 | 3372 |
| BENGALURU RURAL Total | 10 | 19 | 34 | 4 | 367 | 194 | 628 |
| BENGALURU U NORTH Total | 51 | 0 | 15 | 10 | 446 | 188 | 710 |
| BENGALURU U SOUTH Total | 66 | 34 | 68 | 14 | 746 | 466 | 1394 |
| BIDAR Total | 32 | 143 | 0 | 5 | 447 | 350 | 977 |
| CHAMARAJANAGARA Total | 13 | 34 | 26 | 4 | 378 | 267 | 722 |
| CHIKKABALLAPURA Total | 15 | 83 | 70 | 11 | 377 | 287 | 843 |
| CHIKKAMANGALURU Total | 4 | 53 | 104 | 18 | 430 | 61 | 670 |
| CHITRADURGA Total | 25 | 137 | 56 | 15 | 499 | 337 | 1069 |
| DAKSHINA KANNADA Total | 20 | 61 | 88 | 8 | 718 | 593 | 1488 |
| DAVANAGERE Total | 21 | 127 | 95 | 12 | 324 | -18 | 561 |
| DHARWAD Total | 129 | 44 | 56 | 7 | 602 | 435 | 1273 |
| GADAG Total | 71 | 27 | 40 | -1 | 434 | 340 | 911 |
| HASSAN Total | 7 | 70 | 78 | 14 | 742 | 141 | 1052 |
| HAVERI Total | 106 | 118 | 67 | 3 | 676 | 579 | 1549 |
| KALBURGI Total | 126 | 179 | 209 | 3 | 986 | 1049 | 2552 |
| KODAGU Total | 0 | -6 | 31 | 2 | 199 | 75 | 301 |
| KOLAR Total | 11 | 55 | 61 | 13 | 425 | 238 | 803 |
| KOPPAL Total | 132 | 94 | 79 | 4 | 912 | 959 | 2180 |
| MANDYA Total | 9 | 145 | 81 | 11 | 707 | 461 | 1414 |
| MYSURU Total | 39 | 97 | 106 | 14 | 885 | 579 | 1720 |
| RAICHUR Total | 167 | 95 | 119 | 15 | 1249 | 1454 | 3099 |
| RAMANAGARA Total | 9 | 56 | 37 | 5 | 414 | 421 | 942 |
| SHIVAMOGGA Total | 17 | 99 | 72 | 6 | 708 | 464 | 1366 |
| TUMAKURU Total | 12 | 101 | 83 | 16 | 578 | 235 | 1025 |
| TUMAKURU MADHUGIRI Total | 3 | 120 | 60 | 10 | 392 | 301 | 886 |
| UDUPI Total | 2 | 43 | 4 | 6 | 376 | 226 | 657 |
| UTTARA KANNADA Total | 0 | 59 | 27 | 8 | 326 | -13 | 407 |
| UTTARA KANNADA SIRSI Total | 22 | 45 | 32 | 2 | 399 | 496 | 996 |
| VIJAYANAGARA Total | 87 | 193 | 32 | 1 | 772 | 588 | 1673 |
| VIJAYAPURA Total | 192 | 102 | 110 | 10 | 1224 | 870 | 2508 |
| YADAGIRI Total | 94 | 55 | 93 | 4 | 920 | 1385 | 2551 |
| Grand Total | 1936 | 3028 | 2444 | 265 | 22711 | 17971 | 48355 |

ಸರ್ಕಾರಿ ಪ್ರೌಢಶಾಲೆಗಳಲ್ಲಿ ಪ್ರಸ್ತುತ ಖಾಲಿಯಿರುವ ಶಿಕ್ಷಕರುಗಳ ಹುದ್ದೆಗಳ ಮಾಹಿತಿ

| DISTRICT | PCM | CBZ | ARTS | ENG | HINDI | KAN | LAN OTH | PE | SPEC | Total |
|---|---|---|---|---|---|---|---|---|---|---|
| BAGALKOT | 41 | 34 | 69 | 44 | 45 | 58 | 5 | 24 | 0 | 320 |
| BALLARI | 46 | 47 | 86 | 80 | 46 | 72 | 6 | 68 | 4 | 455 |
| BELAGAVI | 49 | 38 | 70 | 38 | 31 | 78 | 9 | 25 | 0 | 338 |
| CHIKKODI | 85 | 68 | 134 | 99 | 35 | 98 | 7 | 62 | 0 | 588 |
| BENGALURU RURAL | -5 | 7 | 43 | 22 | 16 | 18 | 3 | 31 | 0 | 135 |
| BENGALURU NORTH | 11 | 6 | 19 | 19 | 9 | 18 | 4 | 22 | 0 | 108 |
| BENGALURU SOUTH | 28 | 7 | 52 | 38 | 22 | 45 | 4 | 36 | 0 | 232 |
| BIDAR | 24 | 52 | 43 | 45 | 22 | 58 | 27 | 46 | 0 | 317 |
| CHAMARAJANAGARA | 17 | 20 | 24 | 38 | 22 | 21 | 1 | 20 | 2 | 165 |
| CHIKKABALLAPURA | 2 | 24 | 52 | 37 | 15 | 37 | 5 | 42 | 0 | 214 |
| CHIKKAMANGALURU | 16 | 17 | 53 | 20 | 29 | 29 | 2 | 36 | 0 | 202 |
| CHITRADURGA | 8 | 8 | 25 | 18 | 13 | 37 | 0 | 36 | 0 | 145 |
| DAKSHINA KANNADA | 23 | 21 | 32 | 55 | 69 | 60 | 2 | 45 | 0 | 307 |
| DAVANAGERE | 8 | 9 | 23 | 17 | 13 | 34 | 0 | 43 | 0 | 147 |
| DHARWAD | 38 | 12 | 47 | 32 | 21 | 43 | 3 | 22 | 1 | 219 |
| GADAG | 26 | 22 | 48 | 29 | 29 | 36 | 1 | 32 | 0 | 223 |
| HASSAN | 15 | 39 | 98 | 67 | 58 | 59 | 6 | 106 | 0 | 448 |
| HAVERI | 35 | 36 | 49 | 22 | 36 | 40 | 7 | 43 | 0 | 268 |
| KALBURGI | 62 | 60 | 74 | 70 | 47 | 62 | 10 | 81 | 0 | 466 |
| KODAGU | 5 | 12 | 13 | 13 | 15 | 17 | 0 | 14 | 0 | 89 |
| KOLAR | -2 | 20 | 58 | 44 | 50 | 56 | 6 | 55 | 0 | 287 |
| KOPPAL | 90 | 50 | 60 | 80 | 58 | 91 | 3 | 64 | 0 | 496 |
| MANDYA | 20 | 62 | 63 | 54 | 58 | 60 | 4 | 74 | 0 | 395 |
| MYSURU | 22 | 40 | 60 | 59 | 48 | 57 | 4 | 33 | 0 | 323 |
| RAICHUR | 115 | 101 | 131 | 105 | 95 | 92 | 4 | 84 | 0 | 727 |
| RAMANAGARA | 12 | 15 | 43 | 17 | 17 | 40 | 4 | 29 | 0 | 177 |
| SHIVAMOGGA | 22 | 14 | 22 | 62 | 16 | 35 | 6 | 46 | 0 | 223 |
| TUMAKURU | 16 | 21 | 62 | 34 | 34 | 42 | 3 | 50 | 0 | 262 |
| MADHUGIRI | 13 | 19 | 37 | 33 | 21 | 34 | 4 | 36 | 0 | 197 |
| UDUPI | 11 | 8 | 47 | 25 | 39 | 31 | 1 | 33 | 16 | 211 |
| UTTARA KANNADA | 6 | 4 | 13 | 12 | 2 | 7 | 2 | 9 | 0 | 55 |
| SIRSI | 19 | 9 | 26 | 24 | 20 | 23 | 4 | 13 | 0 | 138 |
| VIJAYANAGARA | 40 | 28 | 75 | 50 | 32 | 38 | 5 | 42 | 11 | 321 |
| VIJAYAPURA | 59 | 29 | 87 | 26 | 46 | 54 | 4 | 28 | 0 | 333 |
| YADAGIRI | 113 | 78 | 95 | 102 | 74 | 86 | 6 | 70 | 29 | 653 |
| **Grand Total** | **1090** | **1037** | **1933** | **1530** | **1203** | **1666** | **162** | **1500** | **63** | **10184** |

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 500 |
| ಸದಸ್ಯರ ಹೆಸರು | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ | 16-02-2023 |
| ಉತ್ತರಿಸುವ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಇಲ್ಲದೆ, ರೋಗಿಗಳು ಬೇರೆ ಬೇರೆ ಜಿಲ್ಲೆಗಳಿಗೆ ಹೋಗಿ ಚಿಕಿತ್ಸೆ ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;ಹಾಗಿದ್ದಲ್ಲಿ, ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ಮಂಜೂರು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮವೇನು; (ಪೂರ್ಣ ವಿವರ ನೀಡುವುದು). | ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮಡಿಕೇರಿ ಅಧೀನ ಬೋಧಕ ಆಸ್ಪತ್ರೆಯು 300 ಹಾಸಿಗೆ ಸಾಮರ್ಥ್ಯ ಹೊಂದಿದ್ದು, ಹೆಚ್ಚುವರಿಯಾಗಿ 450 ಹಾಸಿಗೆ ಸಾಮರ್ಥ್ಯದ ಮಲ್ಟಿ ಸ್ಪೇಷಾಲಿಟಿ ಕಟ್ಟಡ ಕಾಮಗಾರಿ ಪ್ರಗತಿಯಲ್ಲಿದ್ದು ಲಭ್ಯವಿರುವ ಎಲ್ಲಾ ಚಿಕಿತ್ಸೆಗಳನ್ನು ಆಸ್ಪತ್ರೆಯಲ್ಲಿಯೇ ಒದಗಿಸಲಾಗುತ್ತಿದೆ. ಸೂಪರ್ ಸ್ಪೆಷಾಲಿಟಿ ಚಿಕಿತ್ಸೆ ಅಗತ್ಯ ಸಂದರ್ಭಗಳಲ್ಲಿ ಮಾತ್ರ ರೋಗಿಯ ಇಚ್ಛಾನುಸಾರ ಶಿಫಾರಸ್ಸು ಮಾಡಲಾಗುತ್ತಿದೆ.<br><br>ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಡಿಕೇರಿ ಅಧೀನ ಬೋಧಕ ಆಸ್ಪತ್ರೆಯು 300 ಹಾಸಿಗೆ ಸಾಮರ್ಥ್ಯ ಹೊಂದಿದ್ದು ಹೆಚ್ಚುವರಿಯಾಗಿ 450 ಹಾಸಿಗೆ ಸಾಮರ್ಥ್ಯದ ಮಲ್ಟಿ ಸ್ಪೆಷಾಲಿಟಿ ಕಟ್ಟಡ ಕಾಮಗಾರಿ ಪ್ರಗತಿಯಲ್ಲಿದ್ದು, ಲಭ್ಯವಿರುವ ಎಲ್ಲಾ ಚಿಕಿತ್ಸೆಗಳನ್ನು ಆಸ್ಪತ್ರೆಯಲ್ಲಿಯೇ ಒದಗಿಸಲಾಗುತ್ತಿದೆ. ಸೂಪರ್ ಸ್ಪೆಷಾಲಿಟಿ ಚಿಕಿತ್ಸೆ ಅಗತ್ಯ ಸಂದರ್ಭಗಳಲ್ಲಿ ಮಾತ್ರ ರೋಗಿಗಳ ಇಚ್ಛಾನುಸಾರ ಶಿಫಾರಸ್ಸು ಮಾಡಲಾಗುತ್ತಿದೆ. |

| | | |
|---|---|---|
| | | ಆದುದ್ದರಿಂದ ಮಡಿಕೇರಿ ಮತ್ತು ವಿರಾಜಪೇಟೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ಪ್ರಾರಂಭಿಸುವ ಬಗ್ಗೆ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಆ) | ಕುಶಾಲನಗರವನ್ನು ಪ್ರತ್ಯೇಕ ತಾಲ್ಲೂಕನ್ನಾಗಿ ಘೋಷಿಸಿದ್ದು, ಹಾಲಿ ಇರುವ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ತಾಲ್ಲೂಕು ಆಸ್ಪತ್ರೆಯಾಗಿ ಮೇಲ್ದರ್ಜೇಗೇರಿಸಲು ಈವರೆವಿಗೂ ಕ್ರಮ ಕೈಗೊಳ್ಳದಿರಲು ಕಾರಣವೇನು; | ಕುಶಾಲನಗರದಲ್ಲಿ ಹಾಲಿ ಇರುವ ಸಮುದಾಯಆರೋಗ್ಯ ಕೇಂದ್ರವನ್ನು ತಾಲ್ಲೂಕು ಆಸ್ಪತ್ರೆಯನ್ನಾಗಿ ಮೇಲ್ದರ್ಜೇಗೇರಿಸುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |
| ಇ) | ಯಾವಾಗ ಆಸ್ಪತ್ರೆ ಮೇಲ್ದರ್ಜೇಗೇರಿಸಿ ಅನುದಾನ ಬಿಡುಗಡೆ ಮಾಡಲಾಗುವುದು; (ಪೂರ್ಣ ವಿವರ ನೀಡುವುದ) | |
| ಈ) | ಮಡಿಕೇರಿಯ 400 ಬೆಡ್ ಜಿಲ್ಲಾ ಆಸ್ಪತ್ರೆಯ ಕಾಮಗಾರಿ ಈಗ ಯಾವ ಹಂತದಲ್ಲಿದೆ; ಈವರೆವಿಗೂ ಎಷ್ಟು ಅನುದಾನ ಖರ್ಚಾಗಿದೆ; ಕಾಮಗಾರಿ ಯಾವಾಗ ಪೂರ್ಣಗೊಳ್ಳುತ್ತದೆ? (ಪೂರ್ಣ ವಿವರ ನೀಡುವುದು) | ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹೊಸದಾಗಿ 450 ಹಾಸಿಗೆ ಸಾಮರ್ಥ್ಯದ ಬೋಧಕ ಆಸ್ಪತ್ರೆ ಕಟ್ಟಡ ನಿರ್ಮಿಸುವ ಕಾಮಗಾರಿಯನ್ನು ಎರಡು ಕಟ್ಟಗಳಾಗಿ, ಅಂದರೆ 150 ಹಾಸಿಗೆ ಸಾಮರ್ಥ್ಯದ ಎಂ.ಸಿ.ಹೆಚ್. ವಿಭಾಗವಾಗಿಯೂ ಮತ್ತು 300 ಹಾಸಿಗೆಯ ಮುಖ್ಯ ಆಸ್ಪತ್ರೆ ವಿಭಾಗವಾಗಿಯೂ ನಿರ್ಮಿಸಲಾಗುತ್ತಿದ್ದು, ಈ ಎರಡು ವಿಭಾಗಗಳ ಪ್ರಸ್ತುತ ಹಂತ ಈ ಕೆಳಗಿನಂತಿರುತ್ತದೆ.<br>150 ಹಾಸಿಗೆ ಎಂ.ಎಇ.ಹೆಚ್. ವಿಭಾಗ:<br>• ಕಟ್ಟಡದೆಲ್ಲಾ ಆರ್‌ಸಿ.ಸಿ. ಸಿವಿಲ್ ಕಾಮಗಾರಿಯು ಮುಕ್ತಾಯಗೊಂಡಿದ್ದು, ಹೊರಭಾಗದ ಗೋಡೆಗಳಿಗೆ ಬಣ್ಣ ಬಳಿಯುವ |

| | | | |
|---|---|---|---|
| | | | ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br>• ಒಳಭಾಗದಲ್ಲಿ ನೆಲಹಾಸು ಕಾಮಗಾರಿ ಹಾಗೂ ಬಣ್ಣದ ಕಾಮಗಾರಿಗಳು ಮುಕ್ತಾಯದ ಹಂತದಲ್ಲಿರುತ್ತದೆ.<br>• ಒಳಭಾಗದ ವಿದ್ಯುತ್ ಮತ್ತು ಅಗ್ನಿ ಸುರಕ್ಷತಾ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಮುಕ್ತಾಯದ ಹಂತದಲ್ಲಿರುತ್ತದೆ.<br>• ಹೊರಭಾಗದ ರಸ್ತೆ ಅಭಿವೃದ್ಧಿ ಚರಂಡಿ ಕೆಲಸ, ವಿದ್ಯುತ್ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br>ಸದರಿ ಕಟ್ಟಡದ ಭೌತಿಕ ಪ್ರಗತಿಯು ಈ ಹಂತದಲ್ಲಿ<br>ಶೇಕಡ ೯೦ರಷ್ಟು ಪೂರ್ಣಗೊಂಡಿರುತ್ತದೆ.<br>300 ಹಾಸಿಗೆಯ ಮುಖ್ಯ ಆಸ್ಪತ್ರೆ ವಿಭಾಗ:<br>• ಕಟ್ಟಡದ ಎಲ್ಲಾ ಆರ್.ಸಿ.ಸಿ. ಸಿವಿಲ್ ಕಾಮಗಾರಿಯು ಮುಕ್ಯಾಗೊಂಡಿದ್ದು, ಹೊರಭಾಗದ ಗೋಡೆಗಳಿಗೆ ಗಿಲಾವು ಮಾಡುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br>• ಒಳಭಾಗದಲ್ಲಿ ನೆಲಹಾಸು ಕಾಮಗಾರಿ ಹಾಗೂ ಬಣ್ಣದ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br>ಸದರಿ ಕಟ್ಟಡದ ಭೌತಿಕ ಪ್ರಗತಿಯು ಈ ಹಂತದಲ್ಲಿ ಶೇಕಡ 75ರಷ್ಟು ಪೂರ್ಣಗೊಂಡಿರುತ್ತದೆ. ಸದರಿ ಕಾಮಗಾರಿಗೆ ಈವರೆಗೆ 95.91 ಕೋಟಿಗಳ ಅನುದಾನ ಖರ್ಚು ಮಾಡಲಾಗಿರುತ್ತದೆ.<br>ಹೊಸದಾಗಿ ನಿರ್ಮಿಸಲಾಗುತ್ತಿರುವ 450 ಹಾಸಿಗೆ ಆಸ್ಪತ್ರೆ ಕಟ್ಟಡಗಳುನ್ನು ನಿರ್ಮಿಸಲು ಪ್ರಾರಂಭಿಕ ಹಂತದಲ್ಲಿ ಅನಿರೀಕ್ಷಿತವಾಗಿ ಎದುರಾದ ಆರೋಗ್ಯ ತುರ್ತು ಪರಿಸ್ಥಿತಿಗೆ ಕಾರಣವಾದಂತಹ ಕರೋನಾ |

| | | |
|---|---|---|
| | | ವೈರಾಣುವಿನಿಂದಾಗಿ ಹಾಗೂ ಈ ತುರ್ತು ಪರಿಸ್ಥಿತಿಯನ್ನು ಎದುರಿಸಲು ರಾಜ್ಯ ಸರ್ಕಾರವು ವಿಧಿಸಿದ ನಿರ್ಬಂಧದ ಆದೇಶಗಳಿಂದಾಗಿ (ಲಾಕ್‌ಡೌನ್) ಕಾಮಗಾರಿಯ ಪ್ರಾರಂಭಿಕ ಹಂತದಲ್ಲಿ ಹಿನ್ನೆಡೆಯಾಗಿರುತ್ತದೆ ಹಾಗೂ ತದನಂತರದಲ್ಲಿ ಮಡಿಕೇರಿ ಜಿಲ್ಲೆಯಲ್ಲಿ ಸುರಿದಂತ ಭಾರಿ ಮಳೆಯಿಂದಾಗಿ ಪ್ರಕೃತಿ ವಿಕೋಪದ ಹಿನ್ನಲೆಯಲ್ಲಿ ಮಾನ್ಯ ಜಿಲ್ಲಾಡಳಿತವು ಮರಳು ವಾಹನ ಹಾಗೂ ಭಾರಿ ವಾಹನಗಳ ಸಾಗಣೆಗೆ ನಿಷೇಧ ಹೇರಿದುದರಿಂದ ಕಾಮಗಾರಿಯ ಪ್ರಾರಂಭಕ್ಕೆ ಮತ್ತಷ್ಟು ಹಿನ್ನೆಡೆಯಾಗಿರುತ್ತದೆ. ಈ ಎಲ್ಲಾ ಅನಿವಾರ್ಯ ಕಾರಣಗಳಿಂದಾಗಿ ಕಾಮಗಾರಿಯು ವಿಳಂಭವಾಗಿರುತ್ತದೆ. ಅದರಂತೆ ನವಂಬರ್-2023ರ ಅಂತ್ಯಕ್ಕೆ ಕಾಮಗಾರಿಯನ್ನು ಪೂರ್ಣಗೊಳಿಸಲು ಎಲ್ಲಾ ಕ್ರಮ ವಹಿಸಲಾಗುತ್ತದೆ. |

ಸಂಖ್ಯೆ:ಎಂಇಡಿ 96 ಎಂಎಸ್‌ಎಫ್ 2023

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 501

2) ಮಾನ್ಯ ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ)

3) ಉತ್ತರಿಸುವ ದಿನಾಂಕ : 16.02.2023

4) ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಡಾ: ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಸೊರಬದಲ್ಲಿರುವ ಪೊಲೀಸ್ ಠಾಣೆಯ ದುರಸ್ತಿ, ಕಾಂಪೌಂಡ್ ನಿರ್ಮಾಣ ಹಾಗೂ ಇನ್ನಿತರ ಅಭಿವೃದ್ಧಿ ಕಾರ್ಯಗಳಿಗೆ ಈಗಾಗಲೇ ರೂ.20.00 ಲಕ್ಷಗಳು ಮಂಜೂರಾತಿಯಾಗಿದ್ದರೂ ಇನ್ನೂ ರೂ.30.00 ಲಕ್ಷಗಳ ತೀವ್ರ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು, ಇಲಾಖೆಯ ಗಮನಕ್ಕೆ ಬಂದಿರುತ್ತದೆ.<br><br>ಸೊರಬ ಪೊಲೀಸ್ ಠಾಣೆಯ ಕಟ್ಟಡವು 2002 ನೇ ಸಾಲಿನಲ್ಲಿ ನಿರ್ಮಾಣವಾಗಿದ್ದು, ಸದರಿ ಕಟ್ಟಡದ ಸಂಕೀರ್ಣದಲ್ಲಿ ಸೊರಬ ವೃತ್ತ ಕಛೇರಿಯು ಕಾರ್ಯನಿರ್ವಹಿಸುತ್ತಿರುತ್ತದೆ. ಸದರಿ ಠಾಣೆಯ ದುರಸ್ಥಿಗೆ ರೂ.20.00 ಲಕ್ಷಗಳ ಅನುದಾನ ಬಿಡುಗಡೆಗೊಂಡಿದ್ದು, ನಿರ್ಮಿತಿಕೇಂದ್ರ, ಶಿವಮೊಗ್ಗ ರವರಿಗೆ ಕಾರ್ಯಾದೇಶ ನೀಡಲಾಗಿದ್ದು, ದುರಸ್ಥಿ ಕಾರ್ಯ ಪ್ರಗತಿಯಲ್ಲಿರುತ್ತದೆ.<br><br>ಸೊರಬ ಪಟ್ಟಣದಲ್ಲಿರುವ ಸೊರಬ ಠಾಣಾ ಆವರಣದ ಸುರಕ್ಷತೆಯ ದೃಷ್ಟಿಯಿಂದ ಕಾಂಪೌಂಡ್ ನಿರ್ಮಿಸಲು ಹಾಗೂ ಇನ್ನಿತರೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ರೂ.30.00 ಲಕ್ಷಗಳ ಮೊತ್ತವನ್ನು ಮಂಜೂರಿಸುವ ಬಗ್ಗೆ ಪರಿಶೀಲಿಸಿ ಕ್ರಮಕೈಗೊಳ್ಳಲಾಗುವುದು. |
| ಆ) | ಆನವಟ್ಟಿ ಪಟ್ಟಣ ಪಂಚಾಯಿತಿಯಲ್ಲಿ ಅಪರಾಧ ರಹಿತ ಕಾನೂನು ಸುವ್ಯವಸ್ಥೆಯನ್ನು ಸಾರ್ವಜನಿಕರಿಗೆ ಒದಗಿಸುವ ದೃಷ್ಟಿಯಿಂದ ನೂತನ<br>ಪೊಲೀಸ್ ಠಾಣೆ ನಿರ್ಮಿಸಲು ಈಗಾಗಲೇ ಮಂಜೂರಾಗಿರುವ 2 ಎಕರೆ ಭೂಮಿಯಲ್ಲಿ ನೂತನ ಠಾಣೆ ನಿರ್ಮಿಸಲು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಮಂಜೂರಾತಿ ನೀಡಲಾಗುವುದೇ: | ಆನವಟ್ಟಿ ಪೊಲೀಸ್ ಠಾಣೆಯು 2005ನೇ ಸಾಲಿನಲ್ಲಿ ನಿರ್ಮಾಣವಾಗಿದ್ದು, ಕಟ್ಟಡವು ಸುಸ್ಥಿತಿಯಲ್ಲಿರುತ್ತದೆ. ಸದರಿ ಠಾಣೆಗೆ ನೂತನ ಕಟ್ಟಡದ ಅವಶ್ಯಕತೆಯನ್ನು ಪರಿಶೀಲಿಸಿ, ಅವಶ್ಯಕತೆ ಇದ್ದಲ್ಲಿ ಮುಂದಿನ ದಿನಗಳಲ್ಲಿ ಪರಿಶೀಲಿಸಿ ಕ್ರಮಕೈಗೊಳ್ಳಲಾಗುವುದು. |
| ಇ) | ಶಿವಮೊಗ್ಗ ಜಿಲ್ಲೆಯಲ್ಲಿರುವ ಏಕೈಕ 'ಎ' ಶ್ರೇಣಿಯ ಇತಿಹಾಸ ಪ್ರಸಿದ್ಧ ಸೊರಬ ತಾಲ್ಲೂಕಿನ ಚಂದ್ರಗುತ್ತಿ ರೇಣುಕಾಂಬ ದೇವಸ್ಥಾನದಲ್ಲಿ ಪ್ರತಿ ವರ್ಷ ಜಾತ್ರೆಯ ಹಾಗೂ ದಸರಾ ಮಹೋತ್ಸವದ ಸಂದರ್ಭದಲ್ಲಿ 9 ದಿನ ನವರಾತ್ರಿ ಉತ್ಸವ, ಪ್ರತಿ ಹುಣಿಮೆ ಹೀಗೆ ಎಲ್ಲಾ ಸಂದರ್ಭಗಳಲ್ಲಿ ಲಕ್ಷಾಂತರ ಭಕ್ತರು ರಾಜ್ಯದ ಮೂಲೆ ಮೂಲೆಯಿಂದ ಆಗಮಿಸುತ್ತಾರೆ. ಆದುದರಿಂದ, ಶ್ರೀ ಕ್ಷೇತ್ರದಲ್ಲಿ ಹಾಳಾಗಿರುವ ಪೊಲೀಸ್ ಠಾಣೆ ಹಾಗೂ ವಸತಿ ಗೃಹಗಳನ್ನು ನಿರ್ಮಾಣ ಮಾಡಲು ಸರ್ಕಾರ ಕ್ರಮ ಕೈಗೊಳ್ಳಲಿದೆಯೇ? | ಸೊರಬ ತಾಲ್ಲೂಕಿನ ಚಂದ್ರಗುತ್ತಿ ಉಪಠಾಣೆ ಕಟ್ಟಡ ಹಾಗೂ 04 ವಸತಿಗೃಹಗಳು ಶಿಥಿಲಾವಸ್ಥೆಯಲ್ಲಿದ್ದ ಕಾರಣ ಸದರಿ ಕಟ್ಟಡಗಳನ್ನು ನೆಲಸಮಗೊಳಿಸಲಾಗಿದ್ದು, ಸದರಿ ಠಾಣೆಯು ಹಾಲಿ ಧಾರ್ಮಿಕದತ್ತಿ ಇಲಾಖೆಯ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ. ಸದರಿ ಉಪ ಠಾಣೆಯ ನಿರ್ಮಾಣಕ್ಕಾಗಿ ಹಾಗೂ ಅವಶ್ಯಕವಿರುವ ವಸತಿ ಗೃಹಗಳ ನಿರ್ಮಾಣದ ಬಗ್ಗೆ ಪರಿಶೀಲಿಸಿ ಅನುದಾನದ ಲಭ್ಯತೆಯ ಆಧಾರದ ಮೇಲೆ ಕ್ರಮ ಕೈಗೊಳ್ಳಲಾಗುವುದು. |

**ಸಂಖ್ಯೆ: ಹೆಚ್‌ಡಿ 10 ಪಿಬಿಎಲ್ 2023**

**(ಆರಗ ಜ್ಞಾನೇಂದ್ರ)**

ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 502 |
| ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ ಎಸ್ (ಸೊರಬ) |
| ಉತ್ತರಿಸುವ ದಿನಾಂಕ | 16.02.2023 |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಜೀವನೋಪಾಯ ಮತ್ತು ಉದ್ಯಮಶೀಲತೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಡಾ: ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಸೊರಬ ಪಟ್ಟಣದಲ್ಲಿರುವ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಗಣನೀಯವಾಗಿ ಹೆಚ್ಚಳವಾಗುತ್ತಿದ್ದು, ಕಾಲೇಜಿನ ಅಭಿವೃದ್ಧಿಯ ದೃಷ್ಟಿಯಿಂದ ಸರ್ಕಾರ ಮಂಜೂರಾತಿ ಮಾಡಿರುವ ಕಾಮಗಾರಿಗಳ ಅನುಷ್ಠಾನ ಮಾಡುವಲ್ಲಿ ರೈಟ್ಸ್ ನವರು ಹಾಗೂ ಲೋಕೋಪಯೋಗಿ ಇಲಾಖೆಯವರು ಅನಗತ್ಯ ವಿಳಂಬ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರಿ ಪಾಲಿಟೆಕ್ನಿಕ್, ಸೊರಬ ಸಂಸ್ಥೆಗೆ 2020-21ನೇ ಸಾಲಿನಲ್ಲಿ ಎಐಸಿಟಿಇ ಮಾರ್ಗಸೂಚಿ ಅನುಸಾರ ಗುರುತಿಸಲಾದ ನ್ಯೂನ್ಯತೆಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ಅಂದಾಜು ಮೊತ್ತ ರೂ.400.00 ಲಕ್ಷಗಳಲ್ಲಿ ಹೆಚ್ಚುವರಿ ಕೊಠಡಿ, ವರ್ಕ್‌ಷಾಪ್ ಮತ್ತು ಪ್ರಯೋಗಾಲಯಗಳ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಲೋಕೋಪಯೋಗಿ ಇಲಾಖೆಗೆ ಹಾಗೂ ಅಂದಾಜು ಮೊತ್ತ ರೂ.200.00 ಲಕ್ಷಗಳಲ್ಲಿ ಹೆಚ್ಚುವರಿ ತರಗತಿ ಕೊಠಡಿಗಳು ಹಾಗೂ ನವೀಕರಣ ಕಾಮಗಾರಿಗಳನ್ನು ಮೆ.ರೈಟ್ಸ್ ನಿರ್ಮಾಣ ಸಂಸ್ಥೆಗೆ ವಹಿಸಲಾಗಿರುತ್ತದೆ.<br><br>ಲೋಕೋಪಯೋಗಿ ಇಲಾಖೆಗೆ ವಹಿಸಲಾದ ಕಾಮಗಾರಿಗೆ ತಾಂತ್ರಿಕ ಮಂಜೂರಾತಿ ನೀಡುವಲ್ಲಿ ವಿಳಂಬವಾಗಿರುತ್ತದೆ ಹಾಗೂ ಪ್ರಸ್ತುತ ಪರಿಷ್ಕೃತ ಡಿ.ಪಿ.ಆರ್ ತಯಾರಿಸಲಾಗುತ್ತಿರುವುದಾಗಿ ಲೋಕೋಪಯೋಗಿ ಇಲಾಖೆ ತಿಳಿಸಿದೆ.<br><br>ಮೆ.ರೈಟ್ಸ್ ನಿರ್ಮಾಣ ಏಜೆನ್ಸಿಗೆ ವಹಿಸಲಾದ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಈ ಕಾಮಗಾರಿಯನ್ನು ಶೀಘ್ರವೇ ಪೂರ್ಣಗೊಳಿಸಲು ಸೂಚಿಸಲಾಗುವುದು. |
| (ಆ) | ಇಲಾಖೆಗಳ ಸಮನ್ವಯದ ಕೊರತೆ ಹಾಗೂ ಇನ್ನಿತರ ಕಾರಣಗಳಿಂದ ಮಂಜೂರಾತಿಯಾಗಿರುವ ಅನುದಾನವು ಅನುಷ್ಠಾನಗೊಳ್ಳುವಲ್ಲಿ ವಿಳಂಬವಾಗುತ್ತಿರುವುದನ್ನು ತಪ್ಪಿಸಲು ಸರ್ಕಾರವು ಅಗತ್ಯ ಕ್ರಮ ಕೈಗೊಳ್ಳುವುದೇ ? | |

ಕಡತ ಸಂಖ್ಯೆ: ಇಡಿ 20 ಹೆಚ್‌ಪಿಟಿ 2023)

(ಡಾ:ಅಶ್ವಥ್ ನಾರಾಯಣ ಸಿ.ಎನ್)
ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ
ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ
ಕೌಶಲ್ಯಾಭಿವೃದ್ಧಿ, ಜೀವನೋಪಾಯ
ಮತ್ತು ಉದ್ಯಮಶೀಲತೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **504** |
| ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ ಎಸ್.<br>(ಸೊರಬ) |
| ಉತ್ತರಿಸಬೇಕಾದ ದಿನಾಂಕ | : | **16.02.2023** |
| ಉತ್ತರಿಸುವ ಸಚಿವರು | : | ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ<br>ಹಾಗೂ ಸಕಾಲ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಡಾ: ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಆನವಟ್ಟಿಯ ಕೆ.ಪಿ.ಎಸ್. ಶಾಲೆಯು ಶಿವಮೊಗ್ಗ ಜಿಲ್ಲೆಯಲ್ಲಿಯೇ 3000ಕ್ಕೂ ಅಧಿಕ ವಿದ್ಯಾರ್ಥಿಗಳಿದ್ದು, ಸನ್ಮಾನ್ಯ ಮುಖ್ಯ ಮಂತ್ರಿಗಳು ಸದರಿ ಶಾಲೆಯ ಆವರಣದಲ್ಲಿ ಇತ್ತೀಚೆಗೆ ನಡೆದ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಸಂದರ್ಭದಲ್ಲಿ ಶಾಲೆಯ ಸಮಗ್ರ ಅಭಿವೃದ್ಧಿಗೆ 7 ಕೋಟಿ ರೂ.ಗಳ ಅನುದಾನ ಕೋರಿ ಸಲ್ಲಿಸಲಾದ ಮನವಿಯಲ್ಲಿರುವ ಅನುದಾನ ಮಂಜೂರಾತಿಗೆ ಕ್ರಮ ಕೈಗೊಳ್ಳಲಾಗಿದೆಯೇ;</td><td>
<ul>
<li>2020-21ನೇ ಸಾಲಿನಲ್ಲಿ ಕೆ.ಪಿ.ಎಸ್ ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಈ ಶಾಲೆಗೆ, ಮೂಲಭೂತ ಸೌಕರ್ಯ ಕಲ್ಪಿಸಲು ಸಮಗ್ರ ಶಿಕ್ಷಣ ಕರ್ನಾಟಕ ಯೋಜನೆಯಡಿಯಲ್ಲಿ ರೂ.2.00 ಕೋಟಿಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ.</li>
<li>2022-23ನೇ ಸಾಲಿನಲ್ಲಿ ಸದರಿ ಶಾಲೆಗೆ ಯಂತ್ರೋಪಕರಣ ಹಾಗೂ ಸಾಧನ ಸಾಮಗ್ರಿಗಳಿಗಾಗಿ ರೂ.14.29 ಲಕ್ಷಗಳ ಅನುದಾನ ನಿಗದಿ ಪಡಿಸಿದ್ದು ರೂ. 7.15 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.</li>
<li>ಸದರಿ ಶಾಲೆಯ ವಾರ್ಷಿಕ ನಿರ್ವಹಣೆಗಾಗಿ ಈ ಕೆಳಕಂಡಂತೆ ಅನುದಾನ ಮಂಜೂರಾಗಿರುತ್ತದೆ.
<table>
<tr><th>ವರ್ಷ</th><th>ಮಂಜೂರಾದ ಅನುದಾನ (ರೂ ಲಕ್ಷಗಳಲ್ಲಿ)</th></tr>
<tr><td>2019-20</td><td>5.00</td></tr>
<tr><td>2020-21</td><td>5.00</td></tr>
<tr><td>2021-22</td><td>4.00</td></tr>
<tr><td>2022-23</td><td>4.00</td></tr>
<tr><td>ಒಟ್ಟು</td><td>18.00</td></tr>
</table></li>
<li>ಸದರಿ ಶಾಲೆಗೆ ರೂ.7.00 ಕೋಟಿಗಳ ಅನುದಾನ ಕೋರಿರುವ ಮನವಿ ಸ್ವೀಕೃತವಾಗಿರುವುದಿಲ್ಲ.</li>
</ul>
</td></tr>
<tr><td>ಆ)</td><td>ಸರ್ಕಾರದ ಆದೇಶದಂತೆ ಮಕ್ಕಳ ಸಂಖ್ಯೆಗೆ ಅನುಗುಣವಾಗಿ ತರಗತಿಗಳನ್ನು ನಡೆಸಲು ಕೆ.ಪಿ.ಎಸ್ ಆನವಟ್ಟಿಗೆ ಇನ್ನೂ 5 ಕೊಠಡಿಗಳ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?</td><td>ಬಂದಿದೆ. ಅನುದಾನದ ಲಭ್ಯತೆಯನ್ನು ಆಧರಿಸಿ ಹಂತ ಹಂತವಾಗಿ ಕ್ರಮವಹಿಸಲಾಗುವುದು.</td></tr>
</table>

**ಇಪಿ: 12 ಎಂಪಿಇ 2023**

(ಬಿ.ಸಿ.ನಾಗೇಶ್)
**ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ**
**ಹಾಗೂ ಸಕಾಲ ಸಚಿವರು**

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 505
ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ.ಎಸ್ (ಸೊರಬ)
ಉತ್ತರಿಸಬೇಕಾದ ದಿನಾಂಕ : 16-02-2023
ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಡಾ:ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕು ಹಾಗೂ ತಾಳಗುಪ್ಪ ಹೋಬಳಿ ಸೇರಿದಂತೆ ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ರೈತರ ಪಂಪ್ ಸೆಟ್ ಗಳಿಗೆ ವಿದ್ಯುತ್ ಒದಗಿಸಲು ಅಕ್ರಮ ಸಕ್ರಮ ಯೋಜನೆಯನ್ನು ಪ್ರಸ್ತುತ ಅಂದಾಜು ಪಟ್ಟಿಯ ಅನುಸಾರ ಅನುಷ್ಠಾನ ಮಾಡಲು ಅಂದಾಜು ರೂ.75 ಕೋಟಿಗಳಿಗೂ ಅಧಿಕ ಅನುದಾನದ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಸೊರಬ ತಾಲ್ಲೂಕು ಹಾಗೂ ತಾಳಗುಪ್ಪ ಹೋಬಳಿ ವ್ಯಾಪ್ತಿಯಲ್ಲಿ 11.03.2011ರ ಸರ್ಕಾರಿ ಆದೇಶದನ್ವಯ ಒಟ್ಟು 1535 ಫಲಾನುಭವಿಗಳು ಅಕ್ರಮ-ಸಕ್ರಮ ಯೋಜನೆಯಡಿ ರೂ.10,000/- ಶುಲ್ಕ ಪಾವತಿಸಿ, ಅರ್ಜಿ ನೋಂದಾಯಿಸಿದ್ದು, ಎಲ್ಲಾ 1535 ಕೃಷಿ ಪಂಪ್‌ಸೆಟ್ ಗಳಿಗೆ ವಿದ್ಯುತ್ ಮೂಲಭೂತ ಸೌಕರ್ಯ ಕಲ್ಪಿಸಲಾಗಿರುತ್ತದೆ.<br><br>ಸರ್ಕಾರಿ ಆದೇಶ 14.07.2014 ರನ್ವಯ ಒಟ್ಟು 7,323 ಫಲಾನುಭವಿಗಳು ರೂ.10,000/- ಮೂಲಭೂತ ಅಭಿವೃದ್ಧಿ ಶುಲ್ಕ ಪಾವತಿಸಿ, ಅರ್ಜಿ ನೋಂದಾಯಿಸಿದ್ದು, ಅವುಗಳ ಪೈಕಿ 3,302 ಕೃಷಿ ಪಂಪ್‌ಸೆಟ್‌ಗಳಿಗೆ ವಿವಿಧ ಹಂತಗಳಲ್ಲಿ ವಿದ್ಯುತ್ ಮೂಲಭೂತ ಸೌಕರ್ಯ ಕಲ್ಪಿಸಲಾಗಿರುತ್ತದೆ ಹಾಗೂ ಬಾಕಿ ಉಳಿದಿರುವ 4,021 ಕೃಷಿ ಪಂಪ್‌ಸೆಟ್‌ಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಬೇಕಾಗಿರುತ್ತದೆ.<br><br>ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಕಾಮಗಾರಿಗಳಿಗೆ ಒಟ್ಟು ಸುಮಾರು ರೂ.60 ಕೋಟಿ ವೆಚ್ಚ ತಗಲಬಹುದು ಎಂದು ಅಂದಾಜಿಸಲಾಗಿದ್ದು, ಹಂತ ಹಂತವಾಗಿ ಮೂಲಭೂತ ಸೌಕರ್ಯ ಕಲ್ಪಿಸಲು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಸದರಿ ಅನುದಾನವನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಬಿಡುಗಡೆ ಮಾಡಿ ಅಕ್ರಮ ಸಕ್ರಮ ಯೋಜನೆಯನ್ನು ಅನುಷ್ಠಾನ ಮಾಡಲು ಕ್ರಮ ಕೈಗೊಳ್ಳಲಾಗುವುದೇ? | |

ಸಂಖ್ಯೆ :ಎನರ್ಜಿ 29 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 510 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ) |
| ಉತ್ತರಿಸಬೇಕಾದ ದಿನಾಂಕ | 16.02.2023 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಶೃಂಗೇರಿ ವಿಧಾನಸಭಾ ಕ್ಷೇತ್ರದ ಎನ್.ಆರ್.ಪುರ, ಕೊಪ್ಪ ಮತ್ತು ಶೃಂಗೇರಿ ತಾಲ್ಲೂಕುಗಳಲ್ಲಿರುವ 108-ಆಂಬ್ಯುಲೆನ್ಸ್ ವಾಹನಗಳು ಕೆಟ್ಟು ನಿಂತಿದ್ದು, ಅನೇಕ ವರ್ಷಗಳಿಂದ ಅವುಗಳನ್ನು ದುರಸ್ತಿಗೊಳಿಸದಿರುವುದರಿಂದ ಸಾರ್ವಜನಿಕರಿಗೆ ತೀವ್ರ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 04 ಆರೋಗ್ಯ ಕವಚ-108 ಆಂಬ್ಯುಲೆನ್ಸ್ ಗಳನ್ನು ನಿಯೋಜಿಸಲಾಗಿದ್ದು, ಈ ಎಲ್ಲಾ ಆಂಬ್ಯುಲೆನ್ಸ್ ಗಳು ಸೇವೆ ಒದಗಿಸುತ್ತಿವೆ.<br>ವಿವರಗಳು ಈ ಕೆಳಕಂಡಂತಿವೆ: |

| ಕ್ರ. ಸಂ | ಆಂಬ್ಯುಲೆನ್ಸ್ ಸಂಖ್ಯೆ | ಲೊಕೇಷನ್ | ಆಂಬ್ಯುಲೆನ್ಸ್ | ಆಫ್ ರೋಡ್/ ಆನ್ ರೋಡ್ |
|---|---|---|---|---|
| 1 | ಕೆಎ 18 ಜಿ 1024 | ಕೊಪ್ಪ ತಾಲ್ಲೂಕು ಆಸ್ಪತ್ರೆ, ಕೊಪ್ಪ ತಾಲ್ಲೂಕು | ಬಿ.ಎಲ್.ಎಸ್ | ಆನ್ ರೋಡ್ |
| 2 | ಕೆಎ 18 ಜಿ 1028 | ಬಾಳೆ ಹೊನ್ನೂರು ಪ್ರಾ.ಆ.ಕೇಂದ್ರ, ಎನ್.ಆರ್ ಪುರ ತಾಲ್ಲೂಕು | ಬಿ.ಎಲ್.ಎಸ್ | ಆನ್ ರೋಡ್ |
| 3 | ಕೆಎ 51 ಜಿ 5175 | ನರಸಿಂಹ ರಾಜು ಪುರ ತಾಲ್ಲೂಕು ಆಸ್ಪತ್ರೆ, ಎನ್.ಆರ್ ಪುರ ತಾಲ್ಲೂಕು | ಬಿ.ಎಲ್.ಎಸ್ | ಆನ್ ರೋಡ್ |
| | ಕೆಎ 01 ಜಿ 6820 | ಶೃಂಗೇರಿ ತಾಲ್ಲೂಕು ಆಸ್ಪತ್ರೆ, ಶೃಂಗೇರಿ ತಾಲ್ಲೂಕು | ಎ.ಎಲ್.ಎಸ್ | ಆನ್ ರೋಡ್ |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಆ) | ಬಂದಿದ್ದಲ್ಲಿ, ಕೆಟ್ಟು ನಿಂತಿರುವ ಈ ಆಂಬ್ಯುಲೆನ್ಸ್ ವಾಹನಗಳನ್ನು ಯಾವ ಕಾಲಮಿತಿಯೊಳಗೆ ದುರಸ್ತಿ ಮಾಡಿ ಸಂಚಾರಕ್ಕೆ ಸುಗಮ ಗೊಳಿಸಲಾಗುವುದು? (ವಿವರ ನೀಡುವುದು) | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ನಿಯೋಜಿಸಲಾಗಿರುವ ಎಲ್ಲಾ 04 ಆರೋಗ್ಯ ಕವಚ-108 ಆಂಬ್ಯುಲೆನ್ಸ್ ಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಯಾವುದೇ ಆಂಬ್ಯುಲೆನ್ಸ್ ಗಳು ದುರಸ್ತಿಗಾಗಿ ಸ್ಥಗಿತಗೊಂಡಿರುವುದಿಲ್ಲ. |

| | |
|---|---|
| | ಇಲಾಖೆಯು ಹಳೆಯ ವಾಹನಗಳನ್ನು ಸೇವೆಯಿಂದ ಹಿಂಪಡೆದು ಹೊಸದಾಗಿ 262 ಆಂಬ್ಯುಲೆನ್ಸ್ ಗಳನ್ನು ಖರೀದಿಸಲು ಖರೀದಿ ಪ್ರಕ್ರಿಯೆಯು ಚಾಲ್ತಿಯಲ್ಲಿದೆ.<br><br>ಸದರಿ ಪ್ರಕ್ರಿಯೆ ಮುಕ್ತಾಯವಾದ ನಂತರ ಆದ್ಯತೆಯ ಮೇರೆಗೆ ಕೊಪ್ಪ ತಾಲ್ಲೂಕು ಆಸ್ಪತ್ರೆ ಲೊಕೇಷನ್ ಹಾಗೂ ಬಾಳೆಹೊನ್ನೂರು ಲೊಕೇಷನ್ ಗಳಿಗೆ ಹೊಸ ಆಂಬ್ಯುಲೆನ್ಸ್ ಒದಗಿಸಲು ನಿಯಮಾನುಸಾರ ಕ್ರಮವಹಿಸಲಾಗುವುದು. |

ಆಕುಕ 08 ಎಸ್‌ಬಿವಿ 2023

(ಡಾ. ಕೆ ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 511
**ಮಾನ್ಯ ಸದಸ್ಯರ ಹೆಸರು** : ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ)
**ಉತ್ತರಿಸಬೇಕಾದ ದಿನಾಂಕ** : 16-02-2023
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ, ಹಾಗೂ ಪರಿಸರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನೂತನ ಪ್ರವಾಸೋದ್ಯಮ ನೀತಿ 2020-25 ರಲ್ಲಿ ಘೋಷಿಸಿರುವ ಪ್ರಮುಖ ಪ್ರೋತ್ಸಾಹಕ ಮತ್ತು ಆದ್ಯತಾ ಕ್ರಮಗಳು ಯಾವುವು; | ರಾಜ್ಯದಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಪ್ರವಾಸಿ ಮೂಲಭೂತ ಸೌಕರ್ಯ ನಿರ್ಮಾಣಕ್ಕಾಗಿ ಹಾಗೂ ಪ್ರವಾಸೋದ್ಯಮವನ್ನು ಆಕರ್ಷಣೆಗೊಳಿಸಲು 2020-26ರ ಕರ್ನಾಟಕ ಪ್ರವಾಸೋದ್ಯಮ ನೀತಿಯನ್ನು ಜಾರಿಗೆ ತಂದಿದೆ. ಈ ನೀತಿ ಅಡಿಯಲ್ಲಿ ಗುರುತಿಸಿರುವ ಆಧ್ಯಾತಾ ಪ್ರವಾಸಿ ತಾಣಗಳಲ್ಲಿ ಈ ಕೆಳಕಂಡ 26 ಪ್ರವಾಸಿ ಉತ್ಪನ್ನಗಳನ್ನು ಅಭಿವೃದ್ಧಿ ಪಡಿಸಲು ಮುಂದೆ ಬರುವ ಖಾಸಗಿ ಬಂಡವಾಳ ಹೂಡಿಕೆದಾರರನ್ನು ಸೆಳೆಯಲು ಸಹಾಯಧನ, ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br><br>1. ಸಾಹಸ ಪ್ರವಾಸೋದ್ಯಮ ಯೋಜನೆ<br>2. ಕೃಷಿ ಪ್ರವಾಸೋದ್ಯಮ ಯೋಜನೆ<br>3. ಮನರಂಜನಾ ಪಾರ್ಕ್<br>4. ಕ್ಯಾರವಾನ್ ಪಾರ್ಕ್ ಯೋಜನೆ<br>5. ಕ್ಯಾರವಾನ್ ಪ್ರವಾಸೋದ್ಯಮಯೋಜನೆ<br>6. ಸಮಾವೇಶಕೇಂದ್ರ<br>7. ಸಾಂಸ್ಕೃತಿಕ ಪ್ರವಾಸೋದ್ಯಮ ಯೋಜನೆ<br>8. ಸಾಂಸ್ಕೃತಿಕ ಗ್ರಾಮ<br>9. ಪರಿಸರ ಪ್ರವಾಸೋದ್ಯಮ ಯೋಜನೆ.<br>10. ಪಾರಂಪರಿಕ ಹೋಟೆಲ್<br>11. ಪಾರಂಪರಿಕ ಪ್ರವಾಸೋದ್ಯಮ ಯೋಜನೆ<br>12. ಪಾರಂಪರಿಕ ನಡಿಗೆ<br>13. ಹೋಂ-ಸ್ಟೇ<br>14. ಹೋಟೆಲ್ ಯೋಜನೆ (ಬಜೆಟ್)<br>15. ಹೋಟೆಲ್ ಯೋಜನೆ (ಪ್ರೀಮಿಯಂ)<br>16. ಹೌಸ್‌ಬೋಟ್ ಯೋಜನೆ<br>17. ವಸ್ತು ಸಂಗ್ರಹಾಲಯಗಳು ಮತ್ತು ಗ್ಯಾಲರಿಗಳು<br>18. ರೋಪ್ ವೇ<br>19. ಪ್ರಮುಖ ಪ್ರೋತ್ಸಾಹಕ ಮತ್ತು ಆದ್ಯತಾ ಕ್ರಮಗಳು ಸುರಕ್ಷತೆ ಮತ್ತು ನೈರ್ಮಲ್ಯ ಪ್ರವಾಸೋದ್ಯಮ ಯೋಜನೆ<br>20. ಧ್ವನಿ ಮತ್ತು ಬೆಳಕಿನ ದರ್ಶನ<br>21. ಟೆಂಟ್ ವಸತಿ ಸೌಕರ್ಯ<br>22. ಥೀಮ್ ಪಾರ್ಕ್<br>23. ಪ್ರವಾಸಿ ವಿವರಣಾ ಕೇಂದ್ರ<br>24. ಪ್ರವಾಸಿ ಲಕ್ಸುರಿ ಕೋಚ್<br>25. ಸ್ವಾಸ್ಥ್ಯ ಕೇಂದ್ರ<br>26. ರಸ್ತೆ ಬದಿ ಸೌಲಭ್ಯಗಳು |
| ಆ) | ರಾಜ್ಯದಲ್ಲಿ ಗಣನೀಯ ಸಂಖ್ಯೆಯಲ್ಲಿ ಪ್ರವಾಸಿಗರು ಬರುತ್ತಿರುವುದರಿಂದ ಮುಂದಿನ ಗುರಿ ಮತ್ತು ಸಾಧನೆಗಳ ಕುರಿತಾದ ಸರ್ಕಾರದ ಕ್ರಮಗಳೇನು; | |

| ಇ) | ಜಿಲ್ಲಾ ಪ್ರವಾಸೋದ್ಯಮ ಸಮಿತಿಗೆ ವಹಿಸಿರುವ ಜವಾಬ್ದಾರಿ ಮತ್ತು ಅವುಗಳ ಅನುಷ್ಠಾನಕ್ಕೆ ಕೈಗೊಂಡ ಕ್ರಮಗಳೇನು; | ಜಿಲ್ಲಾ ಪ್ರವಾಸೋದ್ಯಮ ಸಮಿತಿಗೆ ವಹಿಸಿರುವ ಜವಾಬ್ದಾರಿ ಹಾಗೂ ಅವುಗಳ ಅನುಷ್ಠಾನಕ್ಕೆ ಕೈಗೊಳ್ಳಬೇಕಾಗಿರುವ ಕ್ರಮಗಳನ್ನು ಅನುಬಂಧದಲ್ಲಿ ಒದಗಿಸಿದೆ. |
|---|---|---|
| ಈ) | ಕರ್ನಾಟಕ ಪ್ರವಾಸೋದ್ಯಮವನ್ನು ಅಂತರರಾಷ್ಟ್ರೀಯ ನಕ್ಷೆಯಲ್ಲಿ ಸೇರ್ಪಡೆಗೊಳಿಸುವ ಕುರಿತಾದ ಸರ್ಕಾರದ ಅನುಕರಣೀಯ ಕ್ರಮಗಳು ಯಾವುವು; ಕರಾವಳಿ ಪ್ರವಾಸೋದ್ಯಮ ಅಭಿವೃದ್ಧಿಗೆ ಸಿಆರ್‌ಜೆಡ್ ಅನುಮತಿ ನೀಡಿಕೆಯೊಂದಿಗೆ ರೂಪಿಸಿರುವ ಯೋಜನೆಗಳ ವಿವರಗಳೇನು? | ಕರ್ನಾಟಕ ಪ್ರವಾಸೋದ್ಯಮವನ್ನು ಅಂತರಾಷ್ಟ್ರೀಯ ನಕ್ಷೆಯಲ್ಲಿ ಸೇರ್ಪಡೆಗೊಳಿಸಲು, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರ ಪಡಿಸಿ, ಪ್ರವಾಸಿಗರನ್ನು ಆಕರ್ಷಿಸಲು ದೇಶದ ಪ್ರಮುಖ ನಗರಗಳಲ್ಲಿ ಹಾಗೂ ವಿವಿಧ ದೇಶಗಳಲ್ಲಿ ನಡೆಯುವ ಪ್ರವಾಸಿ ಮೇಳಗಳಲ್ಲಿ ಹಾಗೂ ರೋಡ್ ಶೋಗಳಲ್ಲಿ ಭಾಗವಹಿಸಿ ಪ್ರವಾಸಿ ತಾಣಗಳನ್ನು ಪ್ರಚಾರ ಪಡಿಸಲಾಗುತ್ತಿದೆ.<br><br>2020-26ನೇ ಸಾಲಿನ ಪ್ರವಾಸೋದ್ಯಮ ನೀತಿ ಅಡಿಯಲ್ಲಿ ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳನ್ನು ಆದ್ಯತಾ ಪ್ರವಾಸಿ ತಾಣಗಳನ್ನಾಗಿ ಗುರುತಿಸಲಾಗಿದ್ದು. ಈ ಜಿಲ್ಲೆಗಳಲ್ಲಿ ಬಂಡವಾಳ ಹೂಡಿಕೆ ಮಾಡಲು ಮುಂದೆ ಬರುವ ಖಾಸಗಿ ಹೂಡಿಕೆದಾರರನ್ನು ಸೆಳೆಯಲು ಸಹಾಯಧನ, ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಕರಾವಳಿ ಪ್ರವಾಸೋದ್ಯಮ ಸಂಬಂಧ Ministry of Environment, Forest and Climate Change, IA-III (CRZ Division), ರವರ ಪತ್ರ ದಿ:02-09-2022ರಲ್ಲಿ ರಾಜ್ಯದಿಂದ ಸಲ್ಲಿಸಿರುವ ಕರಾವಳಿ ವಲಯ ನಿರ್ವಹಣಾ ಯೋಜನೆ (Coastal Zone Management Plan)ಗೆ ಅನುಮೋದನೆ ನೀಡಲಾಗಿದೆ. ಪ್ರವಾಸೋದ್ಯಮ ಇಲಾಖೆಗೆ ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಗೆ ಅನುಗುಣವಾಗಿ ಕರಾವಳಿ ಜಿಲ್ಲೆಗಳಲ್ಲಿ ಗುರುತಿಸಿರುವ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಮೂಲಸೌಲಭ್ಯಗಳನ್ನು ಹಂತ ಹಂತವಾಗಿ ಅಭಿವೃದ್ಧಿ ಪಡಿಸಲು ಕ್ರಮ ವಹಿಸಲಾಗುವುದು. |

**TOR 38 TDV 2023**

**(ಆನಂದ್ ಸಿಂಗ್)**
ಪ್ರವಾಸೋದ್ಯಮ, ಜೀವಿಶಾಸ್ತ್ರ,
ಹಾಗೂ ಪರಿಸರ ಸಚಿವರು

# ಅನುಬಂಧ

**2020-26ರ ಕರ್ನಾಟಕ ಪ್ರವಾಸೋದ್ಯಮ ನೀತಿ ಅಡಿಯಲ್ಲಿ ಜಿಲ್ಲಾ ಪ್ರವಾಸೋದ್ಯಮ ಸಮಿತಿಗೆ ವಹಿಸಿರುವ ಜವಾಬ್ದಾರಿ ಹಾಗೂ ಅವುಗಳ ಅನುಷ್ಠಾನಕ್ಕೆ ಕೈಗೊಳ್ಳಬೇಕಾಗಿರುವ ಕ್ರಮಗಳ ವಿವರ ಈ ಕೆಳಗಿನಂತಿವೆ.**

ಜಿಲ್ಲಾ ಪ್ರವಾಸೋದ್ಯಮ ನೀತಿ 2020-26ನೇ ಪ್ರವಾಸೋದ್ಯಮ ನೀತಿಯಲ್ಲಿ ಈ ಕೆಳಕಂಡ ಪ್ರಕಾರ್ಯ ನಿರ್ವಹಿಸತಕ್ಕದ್ದು.

- ರೂ 5.00ಕೋಟಿಯವರೆಗೆ ಅರ್ಹ ಯೋಜನಾ ವೆಚ್ಚ (ಇಪಿಸಿ)ವಿರುವಂತಹ ಪ್ರವಾಸೋದ್ಯಮ ಯೋಜನೆಗಳಿಗೆ ಅನ್ವಯ ವಾಗಬಹುದಾದಂತಹ ಎಲ್ಲಾ ಪ್ರಸ್ತಾವನೆಗಳನ್ನು ಸ್ವೀಕರಿಸುವುದು.

- ಪ್ರವಾಸೋದ್ಯಮ ಯೋಜನೆಗಾಗಿ ಸ್ವೀಕರಿಸಲಾದ ಪ್ರಸ್ತಾವನೆಗಳನ್ನು ಅನ್ವಯವಾಗಬಹುದಾದಂತಹ ಯೋಜನೆಯ ಮೌಲ್ಯಮಾಪನದ ನಿರ್ಣಯಕ್ಕಾಗಿ ಜಿಲ್ಲಾ ಪ್ರವಾಸೋದ್ಯಮ ಪ್ರಭಾರಿ ಅಧಿಕಾರಿಗೆ ಅಥವಾ ಪ್ರವಾಸೊದ್ಯಮ ಇಲಾಖೆಯ ಕಾರ್ಯಕ್ರಮ ನಿರ್ವಹಣಾ ಘಟಕ (ಪಿಎಂಯು) ವಿಭಾಗಕ್ಕೆ ಕಳುಹಿಸುವುದು. ಮುಂದೆ ಜಿಲ್ಲಾ ಪ್ರವಾಸೋದ್ಯಮ ಇಲಾಖೆಯು ಪ್ರಭಾರಿ ಅಧಿಕಾರಿ /ಪಿಎಂಯು ವಿಭಾಗವು ತನ್ನ ಮೌಲ್ಯ ನಿರ್ಣಯ ವರದಿಯನ್ನು ಯೋಜನಾ ಮೌಲ್ಯಮಾಪನಾಕ್ಕಾಗಿ ಜಿಲ್ಲಾ ಪ್ರವಾಸೋದ್ಯಮ ಸಮಿತಿಗೆ ಕಳುಹಿಸತಕ್ಕದ್ದು. ಮೌಲ್ಯ ನಿರ್ಣಯ ವರದಿಯು, ಈ ನೀತಿಯ ಅಡಿಯಲ್ಲಿ ಯೋಜನೆಯ ಪ್ರೋತ್ಸಹಕ, ಸಹಾಯಧನ ಅಥವಾ ರಿಯಾಯತಿಗಳನ್ನು ಪಡೆಯಲು ಅರ್ಹವಾಗಿದೆಯೆ? ಅಥವಾ ಇಲ್ಲವೇ ಎಂಬುದನ್ನು ತಿಳಿಸತಕ್ಕದು.

- ಜಿಲಾ ಪ್ರವಾಸೋದ್ಯಮ ಅಧಿಕಾರಿಯು ಅಥವಾ ಪ್ರವಾಸೋದ್ಯಮ ಇಲಾಖೆಯ ಕಾರ್ಯಕ್ರಮ ನಿರ್ವಹಣಾ ಘಟಕ(ಪಿಎಂಯು) ವಿಭಾಗವು ಸಿದ್ದಪಡಿಸಿದ ಮೌಲ್ಯ ನಿರ್ಣಯ ವರದಿ ಆಧಾರದ ಮೇಲೆ, ಜಿಲ್ಲಾ ಪ್ರವಾಸೋದ್ಯಮ ಸಮಿತಿಯು ಅರ್ಹ ಯೋಜನಾ ವೆಚ್ (ಇಪಿಸಿ) 5.00ಕೋಟಿ ರೂಪಾಯಿಗಳವರೆಗೆ ಇರುವಂಥ ಅರ್ಹ ಪ್ರವಾಸೋದ್ಯಮ ಯೋಜನೆಗಳಿಗಾಗಿ ಅನ್ವಯವಾಗಬಹುದಾದ ಪ್ರೋತ್ಸಾಹಕಗಳು ಸಹಾಯಧನ ಗಳು ರಿಯಾಯತಿಗಳಿಗೆ ಅನುಮೋದನೆ ನೀಡತಕ್ಕದ್ದು.

- ಪ್ರವಾಸೋದ್ಯಮ ಯೋಜನೆಯ ಅನುಷ್ಠಾನಕ್ಕಾಗಿ ಅಗತ್ಯವಾಗಬಹುದಾದಂತೆ ಇತರ ಸರ್ಕಾರಿ ಏಜೆನ್ಸಿಗಳಿಂದ ಅನುಮೋದನೆ ಮತ್ತು ಮಂಜೂರಾತಿಗಳ ಸಮನ್ವಯ ಸಾಧಿಸತಕ್ಕದ್ದು.

- ಅನುಮೋದಿತ ಪ್ರವಾಸೋದ್ಯಮ ಯೋಜನೆಗಳ ಅನುಷ್ಠಾನದ ಪ್ರಗತಿಯ ಮೇಲ್ವಿಚಾರಣೆ ಮಾಡತಕ್ಕದ್ದು.

- 5.00 ಕೋಟಿ ರೂಪಾಯಿಗಳ ವರೆಗಿನ ಅರ್ಹ ಯೋಜನಾ ವೆಚ್ಚ (ಇಪಿಸಿ)ದ ಪ್ರವಾಸೋದ್ಯಮ ಯೋಜನೆಗಳ ಅನುಷ್ಠಾನದಲ್ಲಿ ಅಗುವ ವಿಳಂಬವನ್ನು ತಪ್ಪಿಸಲು ಯೋಜನಾ ಅನುಷ್ಠಾನಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಪರಿಹರಿಸತಕ್ಕದ್ದು.

*****

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 513 |
|---|---|
| ಸದಸ್ಯರು ಹೆಸರು | ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | 16.02.2023 |
| ಉತ್ತರಿಸಬೇಕಾದ ಸಚಿವರು | ಉನ್ನತ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉನ್ನತ ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಪ್ರಥಮ ದರ್ಜೆ ಕಾಲೇಜುಗಳಿಗಾಗಿ ಮಂಜೂರಾಗಿರುವ ಮತ್ತು ಪ್ರಸ್ತುತ ನೇಮಕಗೊಂಡಿರುವ ಬೋಧಕ ಸಿಬ್ಬಂದಿ ವರ್ಗದವರ ಸಂಖ್ಯಾ ವಿವರಗಳು ಹಾಗೂ ಖಾಲಿ ಹುದ್ದೆಗಳ ನೇಮಕಾತಿ ಕುರಿತು ಸರ್ಕಾರದ ಸಕಾಲಿಕ ಕ್ರಮಗಳು ಯಾವುವು; | ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಮಂಜೂರಾಗಿರುವ, ಭರ್ತಿಯಾಗಿರುವ/ನೇಮಕಗೊಂಡಿರುವ ಬೋಧಕ ಸಿಬ್ಬಂದಿ ವರ್ಗದವರ (ಸಹಾಯಕ ಪ್ರಾಧ್ಯಾಪಕರು) ಸಂಖ್ಯಾ ವಿವರ ಈ ಕೆಳಗಿನಂತಿದೆ;<br>ಮಂಜೂರಾದ ಹುದ್ದೆಗಳ ಸಂಖ್ಯೆ: 7611<br>ಭರ್ತಿಯಾದ ಹುದ್ದೆಗಳ ಸಂಖ್ಯೆ: 5791<br>ಖಾಲಿ ಇರುವ ಹುದ್ದೆಗಳ ಸಂಖ್ಯೆ: 1820<br>ಸರ್ಕಾರದ ಪತ್ರ ಸಂಖ್ಯೆ:ಇಡಿ/185/ಡಿಸಿಇ/2018, ದಿನಾಂಕ:03.08.2019 ರಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿನ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿರುತ್ತದೆ. ಸದರಿ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ವಿಶೇಷ ನೇಮಕಾತಿ ನಿಯಮಾವಳಿಗಳನ್ನು ರೂಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/2019(ಭಾ-3), ದಿನಾಂಕ:08.07.2020 ಮತ್ತು ತಿದ್ದುಪಡಿ ಅಧಿಸೂಚನೆ ದಿನಾಂಕ:19.10.2020 ರಲ್ಲಿ ಪ್ರಕಟಿಸಲಾಗಿದೆ. ಸದರಿ ವಿಶೇಷ ನೇಮಕಾತಿ ನಿಯಮಗಳನ್ವಯ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಸರ್ಕಾರವು ದಿನಾಂಕ:26.08.2021 ರ ಸಂಖ್ಯೆ:ಇಡಿ/257/ಡಿಸಿಇ/2019 ರಲ್ಲಿ ಅಧಿಸೂಚನೆ ಹೊರಡಿಸಿದೆ. ಸದರಿ ಸರ್ಕಾರಿ ಅಧಿಸೂಚನೆಯನ್ವಯ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ದಿನಾಂಕ:30.09.2021 ರಂದು ಈಗಾಗಲೇ ಅಧಿಸೂಚನೆ ಹೊರಡಿಸಿದ್ದು, ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಸಹ ನಡೆಸಿರುತ್ತದೆ. ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ಹುದ್ದೆ ಭರ್ತಿಗೆ ಕ್ರಮವಹಿಸಲಾಗುವುದು. |
| ಆ) | ಸಹಾಯಕ ಪ್ರಾಧ್ಯಾಪಕರ ಎಷ್ಟು ಹುದ್ದೆಗಳಿಗೆ ನೇಮಕಾತಿ ಪೂರ್ಣಗೊಳಿಸಲಾಗಿದೆ; ಖಾಲಿ ಇರುವ ಹುದ್ದೆಗಳೆಷ್ಟು; ಖಾಲಿ ಇರುವ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳ ಭರ್ತಿಗೊಳಿಸುವಿಕೆ ಕುರಿತು ಸರ್ಕಾರದ ಮುಂದಿರುವ ಪ್ರಸ್ತಾವನೆಗಳು ಯಾವುವು; | ಮಂಜೂರಾದ 7611 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳ ಪೈಕಿ 5791 ಹುದ್ದೆಗಳಿಗೆ ನೇಮಕಾತಿ ಪೂರ್ಣಗೊಳಿಸಲಾಗಿದೆ. ಪ್ರಸ್ತುತ 1820 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಖಾಲಿ ಇರುತ್ತದೆ. ಈ ಪೈಕಿ ಸರ್ಕಾರದ ಪತ್ರ ಸಂಖ್ಯೆ:ಇಡಿ/185/ಡಿಸಿಇ/2018, ದಿನಾಂಕ:03.08.2019 ರಲ್ಲಿ ಅನುಮತಿ ನೀಡಿರುವ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಸರ್ಕಾರವು ದಿನಾಂಕ:26.08.2021 ರ ಸಂಖ್ಯೆ:ಇಡಿ/257/ಡಿಸಿಇ/2019 ರಲ್ಲಿ ಅಧಿಸೂಚನೆ ಹೊರಡಿಸಿದ್ದು, ಸದರಿ ಸರ್ಕಾರಿ ಅಧಿಸೂಚನೆಯನ್ವಯ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಈಗಾಗಲೇ ಅರ್ಹ |

| | | |
|---|---|---|
| | | ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಿ, ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಸಹ ನಡೆಸಿರುತ್ತದೆ. ಅದರಂತೆ, ಕರ್ನಾಟಕ ಪರೀಕ್ಷಾ ಪ್ರಾಧಿಕಾರದಿಂದ ಅಂತಿಮ ಆಯ್ಕೆ ಪಟ್ಟಿಯು ಸರ್ಕಾರದಲ್ಲಿ ಸ್ವೀಕೃತವಾದ ನಂತರ ನೇಮಕಾತಿ ಆದೇಶ ನೀಡಲು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು. |
| ಇ) | ಸರ್ಕಾರಿ ಕಾಲೇಜುಗಳನ್ನು ಮಾದರಿ ರೂಪದಲ್ಲಿ ವ್ಯವಸ್ಥಿತಗೊಳಿಸುವ ಮೂಲಕ ವಿದ್ಯಾರ್ಥಿಗಳು ಸುಲಭಸಾಧ್ಯ ವಾಗಿ ಉನ್ನತ ಶಿಕ್ಷಣ ಪಡೆಯಲು ಅನುಕೂಲ ವಾಗುವಂತೆ ರಾಜ್ಯದೆಲ್ಲೆಡೆಯ ಸರ್ಕಾರಿ ಕಾಲೇಜುಗಳನ್ನು ಸುವ್ಯವಸ್ಥಿತ ಶಿಕ್ಷಣ ಕೇಂದ್ರಗಳನ್ನಾಗಿಸುವಲ್ಲಿ ಸರ್ಕಾರದ ಸಕಾಲಿಕ ಕ್ರಮಗಳು ಯಾವುವು? | • ಹೆಣ್ಣು ಮಕ್ಕಳಿಗೆ ಬೋಧನಾ ಶುಲ್ಕ ಮತ್ತು ಪ್ರಯೋಗಾಲಯ ಶುಲ್ಕದಿಂದ ವಿನಾಯಿತಿ ನೀಡಲಾಗಿದೆ.<br>• ಕಾಲೇಜುಗಳಲ್ಲಿ ಸಂಗ್ರಹವಾಗುವ ಶುಲ್ಕಗಳನ್ನು 'ಸಾಂಸ್ಥಿಕ ಅಭಿವೃದ್ಧಿ ಯೋಜನೆ' (IDP) ಯ ಮೂಲಕ ಕಾಲೇಜಿನ ಕಟ್ಟಡ ನಿರ್ವಹಣೆ / ದುರಸ್ಥಿ, ಗ್ರಂಥಾಲಯಕ್ಕೆ ಪುಸ್ತಕಗಳ ಖರೀದಿ, ಪೀಠೋಪಕರಣಗಳ ಖರೀದಿ/ದುರಸ್ಥಿ, ಪ್ರಯೋಗಾಲಯಕ್ಕೆ ಉಪಕರಣಗಳು/ಕನ್ಸುಮಬಲ್ಸ್/ಕೆಮಿಕಲ್ಸ್ ಗಳ ಖರೀದಿ, ಇಂಟರ್‌ನೆಟ್ ಸೌಲಭ್ಯ, ಲೇಖನ ಸಾಮಾಗ್ರಿ ಹಾಗೂ ಇನ್ನಿತರೆ ಕಾಲೇಜಿನ ಅಭಿವೃದ್ಧಿ/ಶೈಕ್ಷಣಿಕ ಚಟುವಟಿಕೆಗಳಿಗೆ ಬಳಸಿಕೊಳ್ಳುವುದಕ್ಕೆ ಅನುಮತಿ ನೀಡಲಾಗಿದೆ.<br>• ವಿಜ್ಞಾನ ಕೋರ್ಸುಗಳಿರುವ ಕಾಲೇಜುಗಳಿಗೆ ಪ್ರಯೋಗಾಲಯಕ್ಕೆ ಉಪಕರಣಗಳು, ಕೆಮಿಕಲ್ಸ್ ಹಾಗೂ ಗ್ರಂಥಾಲಯಗಳಿಗೆ ಅಗತ್ಯ ಪಠ್ಯ-ಪುಸ್ತಕಗಳ ಖರೀದಿಗೆ ಪ್ರತಿ ವರ್ಷ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ.<br>• ಇಲಾಖಾ ವ್ಯಾಪ್ತಿಯ ಸರ್ಕಾರಿ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪದವಿ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ ಮತ್ತು ವಿವಿಧ ವಿದ್ಯಾರ್ಥಿವೇತನ ಯೋಜನೆಗಳು ಜಾರಿಯಲ್ಲಿರುತ್ತವೆ.<br>• ಸರ್ಕಾರಿ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಎಲ್.ಎಂ.ಎಸ್ (ಕಲಿಕಾ ನಿರ್ವಹಣಾ ವ್ಯವಸ್ಥೆ) ಆಧಾರಿತ ಡಿಜಿಟಲ್ ಕಲಿಕಾ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ. ಡಿಜಿಟಲ್ ಕಲಿಕೆಯು ವಿಷಯ ಸಂವಹನ, ಲಭ್ಯತೆ ಮತ್ತು ಮೌಲ್ಯಮಾಪನಗಳಲ್ಲಿ ಪರಿವರ್ತಕ ಬದಲಾವಣೆಗಳನ್ನು ತರುವ ಮೂಲಕ ಬೋಧನೆ-ಕಲಿಕೆಗಳಲ್ಲಿ ಕ್ರಾಂತಿ ಮೂಡಿಸುವ ಸಮಗ್ರ ವೇದಿಕೆಯಾಗಿದೆ. ಇದು ಅಧ್ಯಾಪಕರನ್ನು ಸಶಕ್ತಗೊಳಿಸುವ, ವಿದ್ಯಾರ್ಥಿಗಳನ್ನು ಸಮೃದ್ಧಗೊಳಿಸುವ ವ್ಯವಸ್ಥೆಯಾಗಿದೆ. ಇದು ವಿದ್ಯಾರ್ಥಿಗಳು ಸುಲಭಸಾಧ್ಯವಾಗಿ ಉನ್ನತ ಶಿಕ್ಷಣ ಪಡೆಯಲು ಅನುಕೂಲವಾಗುವಂತೆ ಅಪೇಕ್ಷಿತ ಸಮಯ ಮತ್ತು ಸ್ಥಳಗಳಲ್ಲಿ ಜ್ಞಾನಾರ್ಜನೆಯ ಶಕ್ತಿಯನ್ನು ನೀಡುತ್ತದೆ. |

**ಇಡಿ 55 ಡಿಸಿಇ 2023**

ಉನ್ನತ ಶಿಕ್ಷಣ, ಐ.ಟಿ.ಬಿ.ಟಿ. ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 514 |
| ಸದಸ್ಯರ ಹೆಸರು | : ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | : 16.02.2023 |
| ಉತ್ತರಿಸಬೇಕಾದ ಸಚಿವರು | : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಒಟ್ಟು ಸಂಖ್ಯಾ ವಿವರಗಳೇನು; ಅವುಗಳಿಗೆ ಅವಶ್ಯಕ ಮೂಲಭೂತ ಸೌಲಭ್ಯಗಳನ್ನು ಒದಗಿಸಿಕೊಡಲಾಗಿದೆಯೇ; ಮೂಲಸೌಲಭ್ಯಗಳ ಕೊರತೆ ಇರುವ ಎಷ್ಟು ಶಾಲೆಗಳನ್ನು ಗುರುತಿಸಿ ಅಭಿವೃದ್ಧಿಪಡಿಸಲು ಸರ್ಕಾರ ಕ್ರಮ ಕೈಗೊಂಡಿದೆ; | (see below) |

❖ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಒಟ್ಟು ಸಂಖ್ಯಾ ವಿವರಗಳು ಕೆಳಗಿನಂತಿದೆ.

| ಕ್ರ ಸಂ | ಜಿಲ್ಲೆ | ಪ್ರಾಥಮಿಕ ಶಾಲೆಗಳು | ಪ್ರೌಢ ಶಾಲೆಗಳು | ಒಟ್ಟು |
|---|---|---|---|---|
| 1 | ಬೆಂಗಳೂರು ದಕ್ಷಿಣ | 401 | 59 | 460 |
| 2 | ಬೆಂಗಳೂರು ಉತ್ತರ | 259 | 42 | 301 |

❖ ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಅವಶ್ಯಕ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿದೆ ಹಾಗೂ ಅದಕ್ಕಾಗಿ ಕಳೆದ ಮೂರು ವರ್ಷಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ನೀಗಿಸಲು ಕೆಳಗಿನಂತೆ ಅನುದಾನ ನೀಡಲಾಗಿದೆ.

| ಕ್ರ ಸಂ | ಜಿಲ್ಲೆ | 2019-20 | 2020-21 | 2021-22 | ಒಟ್ಟು |
|---|---|---|---|---|---|
| 1 | ಬೆಂಗಳೂರು ದಕ್ಷಿಣ | 178.77 | 223.63 | 247.82 | 650.22 |
| 2 | ಬೆಂಗಳೂರು ಉತ್ತರ | 380.13 | 687.89 | 332.99 | 1401.01 |

❖ ಸಮಗ್ರ ಶಿಕ್ಷಣ ಅಭಿಯಾನ ಯೋಜನೆಯಡಿ ಈ ಕೆಳಕಂಡ 12 ಪ್ರಾಥಮಿಕ ಶಾಲೆಗಳನ್ನು ಪ್ರೌಢಶಾಲೆಗಳನ್ನಾಗಿ ಉನ್ನತೀಕರಿಸಲಾಗಿದೆ.

1. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ದೊಡ್ಡಕಲ್ಲಸಂದ್ರ
2. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಅತ್ತಿಬೆಲೆ
3. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ,ಕೂಡ್ಲು
4. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಶ್ರೀ ಕಡಪಸ್ವಾಮಿ ಮಠ
5. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಾರೋಹಳ್ಳಿ
6. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬಿದರಗೆರೆ
7. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬರಟೇನ ಅಗ್ರಹಾರ
8. ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ಥಣಿಸಂದ್ರ
9. ಸರ್ಕಾರಿ ಉರ್ದು ಮಾದರಿ ಪ್ರಾಥಮಿಕ ಶಾಲೆ, ಫಾರೂಕಿನಗರ
10. ಕೆ.ಪಿ.ಎಸ್ ಹೊನ್ನಗಾನಹಟ್ಟಿ
11. ಕೆ.ಪಿ.ಎಸ್ ಕಗ್ಗಲೀಪುರ
12. ಕೆ.ಪಿ.ಎಸ್ ಆಡುಗೋಡಿ

❖ ವಿವೇಕ ಯೋಜನೆಯಡಿಯಲ್ಲಿ ಪ್ರಾಥಮಿಕ ಶಾಲೆಗಳಿಗೆ 193 ಕೊಠಡಿಗಳು, ಮತ್ತು ಪ್ರೌಢಶಾಲೆಗಳಿಗೆ 15 ಕೊಠಡಿಗಳನ್ನು ನಿರ್ಮಾಣ ಮಾಡಲಾಗುತ್ತಿದೆ.

❖ ಸರ್ಕಾರಿ ಶಾಲೆಗಳಲ್ಲಿ ಕುಡಿಯುವ ನೀರು, ಶೌಚಾಲಯ, ನಿರ್ವಹಣೆಗಾಗಿ ಶಾಲಾ ನಿರ್ವಹಣಾ ಅನುದಾನವನ್ನು ಶಾಲಾ ಎಸ್.ಡಿ.ಎಂ.ಸಿ ಬ್ಯಾಂಕ್ ಖಾತೆಗಳಿಗೆ ಬಿಡುಗಡೆ ಮಾಡಲಾಗಿದೆ.

ವಿವೇಕ ಕೊಠಡಿಗಳಾಗಿ ಪ್ರತಿ ವಿಧಾನ ಸಭಾ ಕ್ಷೇತ್ರಕ್ಕೆ 2022-23 ನೇ ಸಾಲಿಗೆ ತಲಾ 20 ಹೆಚ್ಚುವರಿ ಕೊಠಡಿಗಳನ್ನು ಮಂಜೂರು ಮಾಡಿದ್ದು, ಅಗತ್ಯತೆ ಆಧರಿಸಿ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದೆ, ವಿವೇಕ ಯೋಜನೆಯಡಿಯಲ್ಲಿ 193 ಕೊಠಡಿಗಳು ಮತ್ತು ಪ್ರೌಢಶಾಲೆಗಳಲ್ಲಿ 15 ಕೊಠಡಿಗಳನ್ನು ನಿರ್ಮಾಣ ಮಾಡಲಾಗುತ್ತಿದೆ.

| | | |
|---|---|---|
| ಆ) | ಮಹಾನಗರ ಪ್ರದೇಶಗಳಲ್ಲಿ ಗಣನೀಯ ಸಂಖ್ಯೆಯ ವಲಸಿಗರು, ಬಡ ಮತ್ತು ಮಧ್ಯಮ ವರ್ಗದ ವಿದ್ಯಾರ್ಥಿಗಳು ಸರ್ಕಾರಿ ಶಾಲೆಗಳನ್ನು ಅವಲಂಬಿಸುವ ಕಾರಣ, ಸರ್ಕಾರಿ ಶಾಲೆಗಳಲ್ಲಿ ಸುವ್ಯವಸ್ಥಿತ ಶಿಕ್ಷಣ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು; ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಎಷ್ಟು; | ಮಹಾನಗರ ಪ್ರದೇಶಗಳಲ್ಲಿ ಗಣನೀಯ ಸಂಖ್ಯೆಯ ವಲಸಿಗರು ಬಡ ಮತ್ತು ಮಧ್ಯಮ ವರ್ಗದ ವಿದ್ಯಾರ್ಥಿಗಳು ಸರ್ಕಾರಿ ಶಾಲೆಗಳನ್ನು ಅವಲಂಬಿಸುವ ಕಾರಣ ಸರ್ಕಾರಿ ಶಾಲೆಗಳಲ್ಲಿ ಸುವ್ಯವಸ್ಥಿತ ಶಿಕ್ಷಣ ನೀಡಲು ಎಲ್ಲಾ ಮಕ್ಕಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗಿದೆ.<br>➢ ಚಿಕ್ಕಿ ಮೊಟ್ಟೆ ಮಧ್ಯಾಹ್ನದ ಬಿಸಿಯೂಟವನ್ನು ನೀಡಲಾಗುತ್ತಿದೆ.<br>➢ ಉಚಿತ ಪಠ್ಯ ಪುಸ್ತಕ,<br>➢ ಸಮವಸ್ತ್ರ,<br>➢ ಶೂ, ಸಾಕ್ಸ್<br>➢ ಗುಣಾತ್ಮಕ ಶಿಕ್ಷಣ<br>➢ ಗ್ರಂಥಾಲಯ ವ್ಯವಸ್ಥೆ<br>➢ ಕುಡಿಯುವ ನೀರಿನ ವ್ಯವಸ್ಥೆ<br>➢ ಶೌಚಾಲಯ ವ್ಯವಸ್ಥೆ<br>➢ ಕಲಿಕಾ ಅಭಿವೃದ್ಧಿಗಾಗಿ ಕಲಿಕಾ ಚೇತರಿಕೆ<br>➢ ಕಲಿಕಾ ಹಬ್ಬ<br>➢ ಶಿಕ್ಷಕರುಗಳು ದೀಕ್ಷಾ ಪೋರ್ಟಲ್‌ನಲ್ಲಿ ತರಬೇತಿ<br>➢ ಸರ್ಕಾರಿ ಶಾಲೆಗಳಿಗೆ ಸರ್ಕಾರದಿಂದ ಹಾಗೂ ಎನ್.ಜಿ.ಓ ಗಳಿಂದ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ.<br>❖ ಬೆಂಗಳೂರು ಮಹಾನಗರದ ಬೆಂಗಳೂರು ದಕ್ಷಿಣ ಜಿಲ್ಲೆಯ ವ್ಯಾಪ್ತಿಯ **ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು 75201** ವಿದ್ಯಾರ್ಥಿಗಳು ಮತ್ತು **ಪ್ರೌಢ ಶಾಲೆಗಳಲ್ಲಿ ಒಟ್ಟು 19063** ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ.<br>ಬೆಂಗಳೂರು ಮಹಾನಗರದ ಬೆಂಗಳೂರು ಉತ್ತರ ಜಿಲ್ಲೆಯ ವ್ಯಾಪ್ತಿಯ **ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು 47116** ವಿದ್ಯಾರ್ಥಿಗಳು ಮತ್ತು **ಪ್ರೌಢ ಶಾಲೆಗಳಲ್ಲಿ ಒಟ್ಟು 13494** ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. |
| ಇ) | ಸದರಿ ಶಾಲೆಗಳಲ್ಲಿ ಖಾಲಿ ಇರುವ ವಿವಿಧ ವರ್ಗಗಳ ಸಿಬ್ಬಂದಿಗಳ ಸಂಖ್ಯೆ ಮತ್ತು ಅವುಗಳನ್ನು ಭರ್ತಿಗೊಳಿಸಲು ಸರ್ಕಾರದ ಸಕಾಲಿಕ ಕ್ರಮಗಳು ಯಾವುವು; ಸರ್ಕಾರಿ ಶಾಲೆಗಳ ಜನಪ್ರಿಯತೆ ಹೆಚ್ಚಿಸುವಲ್ಲಿ ಸರ್ಕಾರದ ಅನುಕರಣೀಯ ಕ್ರಮಗಳೇನು? | ❖ **ಬೆಂಗಳೂರು ದಕ್ಷಿಣ ಜಿಲ್ಲೆಗೆ ಸಂಬಂಧಿಸಿದಂತೆ :-**<br>➢ ಪ್ರಾಥಮಿಕ ಶಾಲೆಗಳಲ್ಲಿ 1004 ಶಿಕ್ಷಕರ ಹುದ್ದೆಗಳು ಖಾಲಿಯಿರುತ್ತದೆ.<br>➢ ಪ್ರೌಢಶಾಲೆಗಳಲ್ಲಿ 214 ಶಿಕ್ಷಕರ ಹುದ್ದೆಗಳು ಖಾಲಿಯಿರುತ್ತದೆ.<br>❖ **ಬೆಂಗಳೂರು ಉತ್ತರ ಜಿಲ್ಲೆಗೆ ಸಂಬಂಧಿಸಿದಂತೆ :-**<br>➢ ಪ್ರಾಥಮಿಕ ಶಾಲೆಗಳಲ್ಲಿ 559 ಶಿಕ್ಷಕರ ಹುದ್ದೆಗಳು ಖಾಲಿಯಿರುತ್ತದೆ.<br>➢ ಪ್ರೌಢಶಾಲೆಗಳಲ್ಲಿ 99 ಶಿಕ್ಷಕರ ಹುದ್ದೆಗಳು ಖಾಲಿಯಿರುತ್ತದೆ.<br>❖ ಬೋಧಕೇತರ ವೃಂದದ ಖಾಲಿಯಿರುವ ಹುದ್ದೆಗಳು ಬಡ್ತಿ ಹುದ್ದೆಗಳಾಗಿದ್ದು ಇವುಗಳನ್ನು ಕಾಲಕಾಲಕ್ಕೆ ಬಡ್ತಿ ಮೂಲಕ ತುಂಬಲಾಗುತ್ತಿದೆ.(ಪ್ರದಸ:-05, ದ್ವಿದಸ:-10, ಗ್ರೂಪ್ ಡಿ:- 137)<br>❖ ಸರ್ಕಾರಿ ಶಾಲೆಗಳಲ್ಲಿ ಜನಪ್ರಿಯತೆ ಹೆಚ್ಚಿಸಲು ಈಗಾಗಲೇ ಮಕ್ಕಳಿಗೆ ಉಚಿತವಾಗಿ ಶೂ ಮತ್ತು ಸಾಕ್ಸ್, ಮಧ್ಯಾಹ್ನದ ಉಪಹಾರ ಯೋಜನೆ, ಮುಂತಾದ ಯೋಜನಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>❖ ಪ್ರಸ್ತುತ ಖಾಲಿ ಹುದ್ದೆಗಳಿಗೆ ಎದುರಾಗಿ ಬೆಂಗಳೂರು ದಕ್ಷಿಣ ಮತ್ತು ಉತ್ತರ ಜಿಲ್ಲೆಗಳು ಸೇರಿದಂತೆ ಪ್ರಾಥಮಿಕ ವಿಭಾಗಕ್ಕೆ 27000 ಮತ್ತು ಪ್ರೌಢಶಾಲಾ ವಿಭಾಗಕ್ಕೆ 5909 ಅತಿಥಿ ಶಿಕ್ಷಕರನ್ನು ನೇಮಕಮಾಡಲಾಗಿದೆ. |

ಸಂಖ್ಯೆ: ಇಪಿ 70 ಪಿಜಿಸಿ 2023

**(ಬಿ.ಸಿ. ನಾಗೇಶ್)**
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು.

ಕರ್ನಾಟಕ ವಿಧಾನ ಸಭೆ

| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 515 |
|---|---|---|
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಹ್ಯಾರಿಸ್ ಎನ್.ಎ.(ಶಾಂತಿನಗರ) |
| 3) | ಉತ್ತರಿಸಬೇಕಾದ ದಿನಾಂಕ | 16-02-2023 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಪ್ರಶ್ನೆ | ಉತ್ತರ |
|---|---|
| (ಅ) ಬೆಂಗಳೂರು ಮಹಾನಗರ ಪ್ರದೇಶ ವ್ಯಾಪ್ತಿಯಲ್ಲಿರುವ ಯುವ ಜನತೆಗೆ ಯೋಗ್ಯ ಉದ್ಯೋಗಗಳನ್ನು ಹಾಗೂ ಅವಶ್ಯಕ ಉದ್ಯೋಗ ಕೌಶಲ್ಯಗಳನ್ನು ಹೊಂದುವ ಮೂಲಕ ಸುಸ್ಥಿರ ಜೀವನೋಪಾಯಗಳನ್ನು ಪ್ರೋತ್ಸಾಹಿಸುವ ಸಲುವಾಗಿ ಅನುಷ್ಠಾನಗೊಳಿಸಿರುವ ಯೋಜನೆಗಳು ಹಾಗೂ ಆ ಮೂಲಕ ಕೌಶಲ್ಯ ತರಬೇತಿ ನೀಡಿದ ಒಟ್ಟು ಫಲಾನುಭವಿಗಳ ಸಂಖ್ಯೆ ಎಷ್ಟು; | <u>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ (KSDC)</u><br>ಬೆಂಗಳೂರು ಮಹಾನಗರ ಪ್ರದೇಶ ವ್ಯಾಪ್ತಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಯಾವುದೇ ಯೋಜನೆಗಳನ್ನು ಜಾರಿಗೊಳಿಸಲಾಗಿರುವುದಿಲ್ಲ. ಆದಾಗ್ಯೂ ರಾಜ್ಯದಾದ್ಯಂತ ಈಗಾಗಲೇ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಮತ್ತು ಪ್ರಧಾನ ಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಗಳನ್ನು ರಾಜ್ಯದ ಯುವ ಜನತೆಗೆ ಉಚಿತ ಕೌಶಲ್ಯಾಧಾರಿತ ತರಬೇತಿಯನ್ನು ನೀಡಲು ಅನುಷ್ಠಾನಗೊಳಿಸಲಾಗಿರುತ್ತದೆ.<br>(ಈ ಯೋಜನೆಗಳ ಮೂಲಕ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಕೌಶಲ್ಯ ತರಬೇತಿ ಪಡೆದ ಫಲಾನುಭವಿಗಳ ಸಂಖ್ಯೆಯನ್ನು (ಅನುಬಂಧ-1ರಲ್ಲಿ ನೀಡಲಾಗಿದೆ.)<br><br><u>ರಾಷ್ಟ್ರೀಯ ಜೀವನೋಪಾಯ ಅಭಿಯಾನ</u><br><u>ದೀನದಯಾಳ್ ಅಂತ್ಯೋದಯ ಯೋಜನೆ-(ಡೇ-ನಲ್ಮ್)</u><br>ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯ ರಾಷ್ಟ್ರೀಯ ಜೀವನೋಪಾಯ ಅಭಿಯಾನದಡಿ ಡೇ-ಎನ್‌ಯುಎಲ್‌ಎಂ ಅಭಿಯಾನವು ಕಾರ್ಯನಿರ್ವಹಿಸುತ್ತಿದ್ದು, ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿರುತ್ತದೆ.<br><br>**1) ಸಾಮಾಜಿಕ ಕ್ರೋಢೀಕರಣ ಮತ್ತು ಸಾಂಸ್ಥಿಕ ಅಭಿವೃದ್ಧಿ:**<br>ಸದರಿ ಉಪಘಟಕದಡಿ ಮಹಿಳಾ ಸ್ವ-ಸಹಾಯ ಸಂಘ, ಪ್ರದೇಶ ಮಟ್ಟದ ಒಕ್ಕೂಟಗಳ ರಚನೆ ಹಾಗೂ ಸ್ವ-ಸಹಾಯ ಸಂಘಗಳಿಗೆ ರೂ.10,000/- ಮತ್ತು ಒಕ್ಕೂಟಗಳಿಗೆ ರೂ.50,000/- ಆವರ್ತಕ ನಿಧಿ ವಿತರಣೆ ಹಾಗೂ ಸಂಘ ಮತ್ತು ಒಕ್ಕೂಟದ ಸದಸ್ಯರುಗಳಿಗೆ ವಿವಿಧ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುವುದು.<br><br>**2) ಸ್ವಯಂ ಉದ್ಯೋಗ ಕಾರ್ಯಕ್ರಮ:**<br>ಸದರಿ ಉಪಘಟಕದಡಿ ವೈಯಕ್ತಿಕ ಕಿರು ಉದ್ದಿಮೆ, ಗುಂಪು ಕಿರು ಉದ್ದಿಮೆ ಹಾಗೂ ಎಸ್‌ಹೆಚ್‌ಜಿ ಬ್ಯಾಂಕ್ ಕ್ರೆಡಿಟ್ ಲಿಂಕೇಜ್‌ಗೆ ಸಂಬಂಧಿಸಿದಂತೆ ಕ್ರಮವಾಗಿ ಬ್ಯಾಂಕಿನಿಂದ ರೂ.2.00, ರೂ.10.00 ಲಕ್ಷ ಮತ್ತು ರೂ.1.00 ಲಕ್ಷವರೆಗೆ ಬ್ಯಾಂಕಿನಿಂದ ಸಾಲ ಸೌಲಭ್ಯವನ್ನು ಕಲ್ಪಿಸಲಾಗುವುದು. ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಿಂದ ಭರಿಸಿ ಪಾವತಿಸಲಾಗುವುದು ಹಾಗೂ ಸ್ವ-ಸಹಾಯ ಸಂಘಗಳು ನಿಯಮಿತವಾಗಿ ಸಾಲವನ್ನು ಮರು ಪಾವತಿಸಿದರೆ ಶೇ.3 ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನ ನೀಡಲಾಗುವುದು ಹಾಗೂ ಉದ್ಯಮಶೀಲತಾ ತರಬೇತಿಯನ್ನು ನೀಡಲಾಗುವುದು. (ಅನುಬಂಧ-2ರಲ್ಲಿ ಲಗತ್ತಿಸಿದೆ) |

| | 3) ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ:<br>ಸದರಿ ಉಪಘಟಕದಡಿ ನಗರದ ನಿರುದ್ಯೋಗ ಯುವಕ / ಯುವತಿಯರಿಗೆ ವಿವಿಧ ಉದ್ಯೋಗಾಧಾರಿತ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಿ, ಪ್ರಮಾಣೀಕರಣ ಮತ್ತು ಮೌಲ್ಯಮಾಪನವನ್ನು ಕೈಗೊಂಡು, ಕೇಂದ್ರ ಸರ್ಕಾರದ ಪ್ರಮಾಣ ಪತ್ರವನ್ನು ನೀಡಿ, ತರಬೇತಿಯನ್ನು ಪಡೆದುಕೊಂಡ ಶೇ.70 ರಷ್ಟು ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗವನ್ನು ಕಲ್ಪಿಸಲಾಗುವುದು. (ಅನುಬಂಧ-3ರಲ್ಲಿ ಲಗತ್ತಿಸಿದೆ)<br>4)ನಗರದ ವಸತಿ ರಹಿತರಿಗೆ ಆಶ್ರಯ:<br>ಸದರಿ ಉಪಘಟಕದಡಿ ನಗರದ ವಸತಿ ರಹಿತರನ್ನು ರ್ಯಾಪಿಡ್ ಸಮೀಕ್ಷೆಯ ಮೂಲಕ ಗುರುತಿಸಿ, ಆಶ್ರಯವನ್ನು ಕಲ್ಪಿಸಲಾಗುವುದು.<br>5)ನಗರದ ಬೀದಿ ವ್ಯಾಪಾರಸ್ಥರಿಗೆ ಬೆಂಬಲ:<br>ಸದರಿ ಉಪಘಟಕದಡಿ ನಗರದ ಬೀದಿ ವ್ಯಾಪಾರಸ್ಥರನ್ನು ಗುರುತಿಸಿ, ಗುರುತಿನ ಚೀಟಿ ಮತ್ತು ಮಾರಾಟ ಪ್ರಮಾಣ ಪತ್ರವನ್ನು ವಿತರಿಸಲಾಗುವುದು.<br>6)ಸಾಮರ್ಥ್ಯ ಅಭಿವೃದ್ಧಿ ಮತ್ತು ತರಬೇತಿ:<br>ಸದರಿ ಉಪಘಟಕದಡಿ ಅಭಿಯಾನವನ್ನು ಅನುಷ್ಠಾನಗೊಳಿಸಲು ತೊಡಗಿಸಿಕೊಂಡಿರುವ ಅಧಿಕಾರಿ/ಸಿಬ್ಬಂದಿಗಳಿಗೆ ವಿವಿಧ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಲಾಗುತ್ತಿದೆ.<br>3) 'ಪ್ರಧಾನಮಂತ್ರಿ ಬೀದಿ ವ್ಯಾಪಾರಿಗಳ ಆತ್ಮ ನಿರ್ಭರ್ ನಿಧಿ'ಯ (PM SVANidhi) 'ವಿಶೇಷ ಕಿರು ಸಾಲ ಸೌಲಭ್ಯ ಯೋಜನೆ' (Special Micro Credit facility Scheme)<br>ಕೋವಿಡ್-19 ಅವಧಿಯಲ್ಲಿ ತೊಂದರೆಗೊಳಗಾದ ಬೀದಿ ಬದಿ ವ್ಯಾಪಾರಿಗಳ ಆರ್ಥಿಕ ಸಭಲೀಕರಣಕ್ಕಾಗಿ ಕೇಂದ್ರ ವಸತಿ ಮತ್ತು ನಗರ ವ್ಯವಹಾರಗಳ ಮಂತ್ರಾಲಯ, ಭಾರತ ಸರ್ಕಾರ ನವದೆಹಲಿ ರವರು ಮೇ 14, 2020 ರಂದು ಕೋವಿಡ್-19ರ ಪರಿಣಾಮವಾಗಿ ಬೀದಿ ವ್ಯಾಪಾರಿಗಳಿಗೆ ಅಗತ್ಯ ಹಣಕಾಸು ಸಾಲ ಸೌಲಭ್ಯ ನೀಡುವ ಸಂಬಂಧ ರಾಷ್ಟ್ರ ಮಟ್ಟದಲ್ಲಿ ಪ್ಯಾಕೇಜ್‌ನ್ನು ಘೋಷಿಸಲಾಗಿರುತ್ತದೆ. ಅದರಂತೆ ರಾಜ್ಯದಲ್ಲಿ 'ಪ್ರಧಾನಮಂತ್ರಿ ಬೀದಿ ವ್ಯಾಪಾರಿಗಳ ಆತ್ಮ ನಿರ್ಭರ್ ನಿಧಿ'ಯ (PM SVANidhi) 'ವಿಶೇಷ ಕಿರು ಸಾಲ ಸೌಲಭ್ಯ ಯೋಜನೆ' (Special Micro Credit facility Scheme) ಯನ್ನು ಅನುಷ್ಠಾನಗೊಳಿಸಲಾಗುತ್ತದೆ.<br>ಕಾರ್ಯಕ್ರಮಗಳ ವಿವರ<br>• ಬೀದಿ ವ್ಯಾಪಾರಸ್ಥರಿಗೆ ಕೈಗೆಟಕುವ ದರದಲ್ಲಿ ಕಿರು ಸಾಲ ಸೌಲಭ್ಯವನ್ನು ರೂ.10,000/- ದವರೆಗೆ ನೀಡುವುದು.<br>• ಪ್ರಥಮ ಹಂತದ ಸಾಲವನ್ನು ಸದರಿ ಯೋಜನೆಯಡಿ ಬ್ಯಾಂಕುಗಳಿಂದ ಪಡೆದು ನಿಯಮಿತವಾಗಿ ಮರುಪಾವತಿ ಮಾಡಿದ ಫಲಾನುಭವಿಗಳು 2ನೇ ಹಂತದ ರೂ.20000/- ವರೆಗಿನ ಸಾಲಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.<br>• 2ನೇ ಹಂತದ ರೂ.20,000/- ವರೆಗಿನ ಸಾಲಸೌಲಭ್ಯವನ್ನು ಪಡೆದುಕೊಂಡು ನಿಯಮಿತವಾಗಿ ಮರುಪಾವತಿ ಮಾಡಿದ ಫಲಾನುಭವಿಗಳು 3ನೇ ಹಂತದ ರೂ.50,000/- ವರೆಗಿನ ಸಾಲಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.<br>ನಿಯಮಿತ ಸಾಲ ಮರುಪಾವತಿಗೆ ಉತ್ತೇಜಿಸುವುದು.<br>ಡಿಜಿಟಲ್ ವಹಿವಾಟಿಗೆ ಉತ್ತೇಜನ ಮತ್ತು ಬಹುಮಾನ. (ಅನುಬಂಧ-4ರಲ್ಲಿ ಲಗತ್ತಿಸಿದೆ) |
|---|---|

| | |
|---|---|
| (ಆ) ಕೌಶಲ್ಯಾಭಿವೃದ್ಧಿಯನ್ನು ಸುಶಿಕ್ಷಿತ ಮತ್ತು ಆಸುಶಿಕ್ಷಿತ ಯುವಜನರಿಗೂ ನೀಡುವಲ್ಲಿನ ಮಾದರಿ ತರಬೇತಿ ಯೋಜನೆಗಳ ರೂಪುರೇಷೆಗಳು ಯಾವುವು; ವಿಶೇಷವಾಗಿ ಶಿಕ್ಷಣವನ್ನು ಅಪೂರ್ಣಗೊಳಿಸಿರುವ ಉದ್ಯೋಗ ಬಯಸಿ ಮಹಾನಗರಕ್ಕೆ ವಲಸೆ ಬಂದಿರುವ ಯುವಜನತೆಗೆ ಕೌಶಲ್ಯಾಭಿವೃದ್ಧಿ ಯೋಜನೆಗಳನ್ನು ಲಭ್ಯಗೊಳಿಸುವಲ್ಲಿ ಸರ್ಕಾರದ ಮಾದರಿ ಕ್ರಮಗಳು ಯಾವುವು; | **ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ (KSDC)**<br>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮದಿಂದ ಕೌಶಲ್ಯಾಭಿವೃದ್ಧಿಯನ್ನು ಸುಶಿಕ್ಷಿತ ಮತ್ತು ಅನುಶಿಕ್ಷಿತ ಯುವಜನರಿಗೂ ನೀಡುವಲ್ಲಿನ ಮಾದರಿ ತರಬೇತಿ ಯೋಜನೆಗಳ ರೂಪುರೇಷೆಗಳು ರೂಪಿಸಲಾಗುತ್ತಿದ್ದು, ವಿಶೇಷವಾಗಿ ಶಿಕ್ಷಣವನ್ನು ಅಪೂರ್ಣಗೊಳಿಸಿರುವ ಉದ್ಯೋಗ ಬಯಸಿ ವಲಸೆ ಭಾರದಿರುವ ರೀತಿಯಲ್ಲಿ ಯುವ ಜನತೆಗೆ ರಾಜ್ಯದಾದ್ಯಂತದ ಉಚಿತ ಕೌಶಲ್ಯಾಭಿವೃದ್ಧಿಇ ಯೋಜನೆಗಳಾದ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಹಾಗೂ ಪ್ರಧಾನ ಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಗಳನ್ನು ಜಾರಿಗೊಳಿಸಲಾಗಿದೆ.<br>(ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮದಿಂದ ಕೈಗೊಳ್ಳಲಾದ ಮಾದರಿ ಕ್ರಮಗಳ ವಿವರ (ಅನುಬಂಧ-5ರಲ್ಲಿ ನೀಡಲಾಗಿದೆ)<br><br>**ರಾಷ್ಟ್ರೀಯ ಜೀವನೋಪಾಯ ಅಭಿಯಾನ**<br>**ಸಂಜೀವಿನಿ- ಕೆಎಸ್‌ಆರ್‌ಎಲ್‌ಪಿಎಸ್ ಸಂಸ್ಥೆ (ಡೇ-ಎನ್‌ಆರ್‌ಎಲ್‌ಎಂ)**<br><br>ಗ್ರಾಮೀಣ ಪ್ರದೇಶದ ಸುಶಿಕ್ಷಿತ ಮತ್ತು ಅಸುಶಿಕ್ಷಿತ ಯುವಜನರಿಗೆ ಈ ಕೆಳಗಿನ ತರಬೇತಿ ಕಾರ್ಯಕ್ರಮಗಳಡಿ ಕೌಶಲ್ಯಾಭಿವೃದ್ಧಿ ತರಬೇತಿಗಳನ್ನು ಒದಗಿಸುವ ಮೂಲಕ ಉದ್ಯೋಗ ಪಡೆಯಲು ನಿರಂತರ ಬೆಂಬಲಿಸಲಾಗುತ್ತಿದೆ.<br>1. **ದೀನ್ ದಯಾಳ್ ಉಪಾದ್ಯಾಯ ಗ್ರಾಮೀಣ ಕೌಶಲ್ಯ ಯೋಜನೆಯಡಿ** ಗ್ರಾಮಾಂತರ ಪ್ರದೇಶದಲ್ಲಿನ 18 ರಿಂದ 35 ವಯೋಮಾನದ ನಿರುದ್ಯೋಗಿ ಯುವಕ/ಯುವತಿಯರಿಗೆ ವಿವಿಧ ವಿಷಯಗಳಡಿ ತರಬೇತಿಗಳನ್ನು ನೀಡಿ ಉದ್ಯೋಗ ಕಲ್ಪಿಸಲಾಗುತ್ತಿದೆ. ಯೋಜನೆಯಡಿ ರಾಜ್ಯದ ವಿವಿಧ ಭಾಗದಲ್ಲಿ 16 ಯೋಜನಾ ಅನುಷ್ಠಾನ ಸಂಸ್ಥೆಗಳ ಮೂಲಕ 22ತರಬೇತಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, 18 ಟ್ರೇಡ್‌ಗಳಲ್ಲಿ ತರಬೇತಿ ಲಭ್ಯವಿದ್ದು, ಕನಿಷ್ಠ 8ನೇ ತರಗತಿ ವ್ಯಾಸಂಗ ಮಾಡಿದವರಿಗೂ ಟ್ರೇಡ್‌ಗಳ ಅನ್ವಯದಂತೆ ಪರಿಗಣಿಸಲಾಗುತ್ತಿದೆ.<br>2. **ಗ್ರಾಮೀಣ ಸ್ವಉದ್ಯೋಗ ತರಬೇತಿ ಕೇಂದ್ರ ಯೋಜನೆಯಡಿ** ಗ್ರಾಮಾಂತರ ಪ್ರದೇಶದಲ್ಲಿನ 18 ರಿಂದ 45 ವಯೋಮಾನದ ನಿರುದ್ಯೋಗಿ ಯುವಕ/ ಯುವತಿಯರಿಗೆ ವಿವಿಧವೃತ್ತಿಗಳಡಿ ತರಬೇತಿಗಳನ್ನು ನೀಡಿಉದ್ಯೋಗ ಹೊಂದಲು ಕಾರ್ಯಕ್ರಮದಡಿ ರಾಜ್ಯದ 31 ಕೇಂದ್ರಗಳಲ್ಲಿ 64 ವಿವಿಧ ತರಬೇತಿಗಳು ಲಭ್ಯವಿರುತ್ತದೆ.<br>• ಈ ಯೋಜನೆಗಳ ಕುರಿತು ಪ್ರತಿಯೊಂದು ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಗ್ರಾಮ ಪಂಚಾಯಿತಿ ಮಟ್ಟದ ಒಕ್ಕೂಟಗಳ ಮೂಲಕ ಯುವಜನತೆಗೆ ಕೌಶಲ್ಯಾಭಿವೃದ್ಧಿ ಇಲಾಖೆಯಡಿಯಲ್ಲಿನ ವಿವಿಧ ತರಬೇತಿಗಳ ಬಗ್ಗೆ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳ ಮುಖಾಂತರ ಜಾಗೃತಿ ಶಿಕ್ಷಣವನ್ನು ನೀಡಲಾಗುತ್ತಿದೆ.<br>• ಸಂಸ್ಥೆಯ ಸಾಮಾಜಿಕ ಜಾಲತಾಣಗಳಲ್ಲಿ ಲಭ್ಯವಿರುವ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳ ವಿವರ ಮತ್ತು ಸದುಪಯೋಗ ಪಡೆಯುವ ಕುರಿತು ನಿರಂತರ ಪ್ರಕಟಣೆಗಳನ್ನು ನೀಡಲಾಗುತ್ತಿದೆ. ಅಷ್ಟೇ ಅಲ್ಲದೆ ಕೌಶಲ್ಯ ಸಹಾಯವಾಣಿ ಸ್ಥಾಪಿಸಲಾಗಿದೆ.<br>• ಉದ್ಯೋಗ ಬಯಸಿ ಬೆಂಗಳೂರು ಮಹಾನಗರಕ್ಕೆ ಆಗಮಿಸುವ ಗ್ರಾಮೀಣ ಯುವ ಜನತೆಗಾಗಿ ಡಿಡಿಯು-ಜಿಕೆವೈ ಕಾರ್ಯಕ್ರಮದಡಿ ತಾತ್ಕಾಲಿಕ ತಂಗುದಾಣವಾಗಿ ವಲಸೆ ಕೇಂದ್ರ (Migration Centre) ಸ್ಥಾಪಿಸಲು ಅರ್ಹ ಸಂಸ್ಥೆಯ ಆಯ್ಕೆಗಾಗಿ ಟೆಂಡರ್ ಪ್ರಕ್ರಿಯೆ ಕೈಗೊಳ್ಳಲಾಗಿದೆ.<br><br>**ದೀನದಯಾಳ್ ಅಂತ್ಯೋದಯ ಯೋಜನೆ-(ಡೇ-ನಲ್ಮ್)**<br>ಡೇ-ಎನ್‌ಯುಎಲ್‌ಎಂ ಅಭಿಯಾನವು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಸರ್ಕಾರವು 876 ವಿವಿಧ ತರಬೇತಿ ವಿಷಯಗಳನ್ನು ತಿಳಿಸಿದ್ದು, ಅದರಂತೆ ನಗರದ ನಿರುದ್ಯೋಗ ಯುವಕ / ಯುವತಿಯರಿಗೆ ವಿವಿಧ ಉದ್ಯೋಗಾಧಾರಿತ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಿ, ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗವನ್ನು ಕಲ್ಪಿಸಲಾಗುವುದು. (ಅನುಬಂಧ-6ರಲ್ಲಿ ಲಗತ್ತಿಸಿದೆ.) |

| | | |
|---|---|---|
| | | ಮುಂದುವರೆದು ಶ್ರೀ ಸಂತೋಷ್ ಕುಮಾರ್.ಎನ್. ಇವರ ಮೇಲೆ ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ನಗರ ಪೊಲೀಸ್ ಠಾಣೆಯಲ್ಲಿ ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರ, ಚಿಂತಾಮಣಿ ಇವರ ದೂರಿನ ಮೇರೆಗೆ ಎಫ್.ಐ.ಆರ್. ಸಂಖ್ಯೆ:0017/2022ಅನ್ನು ದಾಖಲಾಗಿದ್ದು, ವಿಚಾರಣೆ ಪ್ರಗತಿಯಲ್ಲಿರುತ್ತದೆ. |
| ಇ) | ಸದರಿ ವಿದ್ಯಾರ್ಥಿ ವೇತನವನ್ನು ಅದೇ ಕಾಲೇಜಿನ ಪ್ರಾಂಶುಪಾಲರು, ಅಧೀಕ್ಷಕರು ಮತ್ತು ದ್ವಿತೀಯ ದರ್ಜೆ ಸಹಾಯಕರು ಶಾಮೀಲಾಗಿ ಹಣ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ರಾಜ್ಯಲೆಕ್ಕಪತ್ರ ಇಲಾಖೆಯವರು ಆಯುಕ್ತಾಲಯಕ್ಕೆ ವರದಿ ನೀಡಿರುವುದುನಿಜವೇ? | ಸದರಿ ವರದಿಯಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಶಾರದಾ.ಕೆ ಹಾಗೂ ಕಛೇರಿ ಅಧೀಕ್ಷಕರಾದ ಶ್ರೀ ದೇವಾನಂದ್ ಇವರುಗಳು ಸರ್ಕಾರಿ ಮತ್ತು ಸಾರ್ವಜನಿಕ ಹಣವನ್ನು ರಕ್ಷಣೆ ಮಾಡಲು ಮುಂಜಾಗ್ರತಾ ಕ್ರಮ ಕೈಗೊಳ್ಳದೆ ಉದಾಸೀನತೆ ತೋರಿ ಕರ್ತವ್ಯ ಲೋಪ ಎಸಗಿರುತ್ತಾರೆಂದು ತಿಳಿಸಲಾಗಿರುತ್ತದೆ. |
| ಈ) | ವರದಿ ನೀಡಿದ್ದಲ್ಲಿ, ಇಲ್ಲಿಯವರೆಗೆ ಪ್ರಾಂಶುಪಾಲರ ಮೇಲೆ ಏಕೆ ಕ್ರಮಕೈಗೊಂಡಿರುವುದಿಲ್ಲ | ಸರ್ಕಾರದ ಆದೇಶ ಸಂ: ಇಡಿ 17 ಡಿಸಿಇ 2022, ದಿನಾಂಕ: 06.12.2022ರಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರ, ಚಿಂತಾಮಣಿ ಕಾಲೇಜಿನ ಪ್ರಾಂಶುಪಾಲರು, ಅಧೀಕ್ಷಕರು ಮತ್ತು ದ್ವಿತೀಯ ದರ್ಜೆ ಸಹಾಯಕರ ವಿರುದ್ಧ ವಿದ್ಯಾರ್ಥಿ ವೇತನ ದುರುಪಯೋಗ ಆರೋಪ ಕುರಿತು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಲಾಗಿರುತ್ತದೆ. |
| ಉ) | ಪ್ರಾಂಶುಪಾಲರ ವಿರುದ್ಧ ಉದ್ದೇಶಪೂರ್ವಕವಾಗಿ ಕ್ರಮಜರುಗಿಸದೇ ಇರುವ ಅಧಿಕಾರಿಗಳ ವಿರುದ್ಧ ಕ್ರಮಜರುಗಿಸಲಾಗುವುದೇ? | ಉದ್ಭವಿಸುವುದಿಲ್ಲ. |
| ಊ) | ಹಾಗಿದ್ದಲ್ಲಿ, ಇವರುಗಳ ವಿರುದ್ಧ ಯಾವ ಕಾಲಮಿತಿಯೊಳಗೆ ಕ್ರಮ ಜರುಗಿಸಲಾಗುವುದು? (ವಿವರನೀಡುವುದು) | |

**ಕಡತ ಸಂಖ್ಯೆ: ಇಡಿ 58 ಡಿಸಿಇ 2023**

**(ಡಾ. ಅಶ್ವಥ್ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ವಿದ್ಯುನ್ಮಾನ, ಐ.ಟಿ&ಬಿ.ಟಿ. ವಿಜ್ಞಾನ
ಮತ್ತು ತಂತ್ರಜ್ಞಾನ, ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 532 |
| 02. | ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ. ಕೃಷ್ಣಾರೆಡ್ಡಿ. ಎಂ. (ಚಿಂತಾಮಣಿ) |
| 03. | ಉತ್ತರಿಸುವ ದಿನಾಂಕ | : | 16-02-2023 |
| 04. | ಉತ್ತರಿಸುವ ಸಚಿವರು. | : | ಗೃಹ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಚಿಂತಾಮಣಿ ತಾಲ್ಲೂಕು, ಅಂಬಾಜಿದುರ್ಗ ಹೋಬಳಿ, ಚಿಕ್ಕಕೊಂಡ್ರಹಳ್ಳಿ ಗ್ರಾಮದ ನಿವಾಸಿಯಾಗಿರುವ ಅಂಗನವಾಡಿ ಕಾರ್ಯಕರ್ತೆಯೊಬ್ಬರು ಓಂ ಶಕ್ತಿ ಸ್ತ್ರೀ-ಶಕ್ತಿ ಸಂಘ, ಶ್ರೀ ವೆಂಕಟೇಶ್ವರ ಸ್ತ್ರೀ-ಶಕ್ತಿ ಸಂಘ ಹಾಗೂ ಶ್ರೀ ಸಾಯಿ ಸ್ತ್ರೀ-ಶಕ್ತಿ ಸಂಘ ಎಂಬ ಹೆಸರಿನಲ್ಲಿ ಸಂಘಗಳನ್ನು ಸ್ಥಾಪಿಸಿ ಸಂಘದ ಸದಸ್ಯರ ಹೆಸರಿನಲ್ಲಿ ನಕಲಿ ದಾಖಲೆಗಳನ್ನು ಸೃಷ್ಟಿಸಿ ಲಕ್ಷಾಂತರ ರೂಪಾಯಿಗಳನ್ನು ಹೆಚ್.ಡಿ.ಎಫ್.ಸಿ ಬ್ಯಾಂಕ್, ಚಿಕ್ಕಬಳ್ಳಾಪುರ ಮುಖಾಂತರ ಡ್ರಾ ಮಾಡಿಕೊಂಡಿರುವವರ ವಿರುದ್ಧ ಚಿಂತಾಮಣಿಯ ಆರಕ್ಷಕ ವೃತ್ತ ನಿರೀಕ್ಷಕರ ಕಛೇರಿಯಲ್ಲಿ ದೂರನ್ನು ನೀಡಿದ್ದರೂ ಸಹ ಇಲ್ಲಿವರೆಗೆ ಎಫ್.ಐ.ಆರ್‌ನ್ನು ದಾಖಲಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪಿರ್ಯಾದುದಾರರಾದ ಶ್ರೀಮತಿ ಮಂಜಮ್ಮ ರವರು ದೂರು ನೀಡಿದ್ದು, ಈ ಬಗ್ಗೆ ಕಾನೂನು ರೀತ್ಯಾ ಪ್ರಕರಣ ದಾಖಲಿಸಿ, ಅಗತ್ಯ ಕ್ರಮ ಕೈಗೊಳ್ಳಲಾಗಿರುತ್ತದೆ. ಪ್ರಕರಣದ ವಿವರ ಈ ಕೆಳಕಂಡಂತಿದೆ.<br>ಶ್ರೀಮತಿ ಮಂಜಮ್ಮ ಕೊಂ ದ್ಯಾವಪ್ಪ, 45 ವರ್ಷ, ಕುರುಬರು, ಆರ್ ಕೆ ಶಾಲೆಯಲ್ಲಿ ಸಹಾಯಕರು ಕೆಲಸ, ವಾಸ: ಚಿಕ್ಕಕೊಂಡ್ರಹಳ್ಳಿ ಗ್ರಾಮ, ಚಿಂತಾಮಣಿ ತಾಲ್ಲೂಕು ರವರು ದಿನಾಂಕ: 06-12-2022 ರಂದು ಚಿಂತಾಮಣಿ ಗ್ರಾಮಾಂತರ ಪೊಲೀಸ್ ಠಾಣೆಗೆ ಹಾಜರಾಗಿ 2016ನೇ ಮತ್ತು 2018ನೇ ಸಾಲಿನಲ್ಲಿ ನಮ್ಮ ಗ್ರಾಮದ ಅಂಗನವಾಡಿ ಕಾರ್ಯಕರ್ತೆ ಅಲವೇಲಮ್ಮ ಕೊಂ ಮಂಜುನಾಥ, 30 ವರ್ಷ, ಭೋವಿ ಜನಾಂಗ, ರವರು ನಮ್ಮ ಗ್ರಾಮದಲ್ಲಿ 1) ಓಂ ಶಕ್ತಿ ಸ್ತ್ರೀ ಶಕ್ತಿ ಸಂಘ, 2) ಶ್ರೀ ವೆಂಕಟೇಶ್ವರ ಸ್ತ್ರೀ ಶಕ್ತಿ ಸಂಘ, 3) ಶ್ರೀ ಸಾಯಿ ಸ್ತ್ರೀ ಶಕ್ತಿ ಸಂಘ ಎಂಬ ಹೆಸರುಗಳಲ್ಲಿ 3 ಸ್ತ್ರೀ ಶಕ್ತಿ ಸಂಘಗಳನ್ನು ತೆರೆದು, ಸಂಘದ ಮೂಲಕ ಸದಸ್ಯರಿಗೆ ಹಣವನ್ನು ಸಾಲ ಕೊಡಿಸಿಕೊಡುತ್ತೇನೆಂದು ಹೇಳಿ ಪ್ರತಿ ಸಂಘಕ್ಕೆ ತಲಾ 10 ಜನರಂತೆ ಅಲವೇಲಮ್ಮ ರವರನ್ನು ಒಳಗೊಂಡಂತೆ 30 ಜನ ಸದಸ್ಯರನ್ನು ನೇಮಿಸಿಕೊಂಡು ಸದಸ್ಯರಿಂದ ಓಟರ್ ಐಡಿ ಕಾರ್ಡ್, ಆಧಾರ್ ಕಾರ್ಡ್ ಮತ್ತು ಫೋಟೋ ದಾಖಲೆಗಳನ್ನು ಪಡೆದುಕೊಂಡು ಚಿಕ್ಕಬಳ್ಳಾಪುರ ಹೆಚ್.ಡಿ.ಎಫ್.ಸಿ ಬ್ಯಾಂಕಿನ ಶಾಖೆಯಲ್ಲಿ 3 ಖಾತೆಗಳನ್ನು ತೆರೆದಿರುತ್ತಾರೆ. ಸದರಿ 3 ಖಾತೆಗಳಲ್ಲಿ ಅಲವೇಲಮ್ಮ ರವರು ಸದಸ್ಯರ ಫೋಟೋಗಳು ಮತ್ತು ಮೊಬೈಲ್ ನಂಬರಗಳ ಬದಲಿಗೆ ಬೇರೆಯವರ ಫೋಟೋಗಳನ್ನು ಮತ್ತು ಮೊಬೈಲ್ ನಂಬರಗಳನ್ನು ಹಾಕಿಕೊಂಡು ಮತ್ತು ಸದ್ಯಸ್ಯರ ಸಹಿಗಳಂತೆ ನಕಲಿ ಸಹಿಗಳನ್ನು ಅಲವೇಲಮ್ಮ ರವರು ಮಾಡಿಕೊಂಡು ಸದಸ್ಯರ ಹೆಸರುಗಳಲ್ಲಿ 3 ಖಾತೆಗಳಿಂದ ಸದಸ್ಯರ ಗಮನಕ್ಕೆ ಬಾರದೆ ಇದುವರೆಗೂ ಸುಮಾರು ರೂ. 16,80,000/- ಗಳ ಹಣವನ್ನು ಸಾಲವಾಗಿ ಪಡೆದುಕೊಂಡು ಸಂಘದ ಸದಸ್ಯರಿಗೆ ಮೋಸ ಮಾಡಿರುತ್ತಾರೆ. ನಾವುಗಳು ಇತ್ತೀಚಿಗೆ ನಮ್ಮ ಗ್ರಾಮದಲ್ಲಿ ಬೇರೆ ಸಂಘಗಳಿಂದ ಸಾಲಕ್ಕಾಗಿ ಅರ್ಜಿಯನ್ನು ನೀಡಿದಾಗ ನಮ್ಮಗಳ ಸಾಲದ ಹಣ ಬಾಕಿ ಇರುವುದಾಗಿ ತಿಳಿದು ಬಂದಿರುತ್ತದೆ. ನಾವುಗಳು ಚಿಕ್ಕಬಳ್ಳಾಪುರ ಹೆಚ್.ಡಿ.ಎಫ್.ಸಿ ಬ್ಯಾಂಕಿನ ಶಾಖೆಯಲ್ಲಿ ಮ್ಯಾನೇಜರ್ ರವರ ಬಳಿ ವಿಚಾರ ಮಾಡಿದಾಗ 3 ಸಂಘಗಳ ಹೆಸರಿನಲ್ಲಿ ಸಾಲವನ್ನು ಅಲವೇಲಮ್ಮರವರು ಪಡೆದುಕೊಂಡಿರುವುದಾಗಿ ತಿಳಿಸಿರುತ್ತಾರೆ.<br>ಈ ವಿಚಾರವನ್ನು ಅಲವೇಲಮ್ಮರವರಿಗೆ ತಿಳಿಸಿ ವಿಚಾರ ಮಾಡಿದಾಗ ನಾನು ನಿಮ್ಮಗಳ ಹೆಸರಿನಲ್ಲಿ ಸ್ತ್ರೀ ಶಕ್ತಿ ಸಂಘಗಳಿಂದ ಯಾವುದೇ ಸಾಲದ ಹಣವನ್ನು ಪಡೆದುಕೊಂಡಿರುವುದಿಲ್ಲ ಎಂದು ಸುಳ್ಳು ಹೇಳಿದ್ದು, ನಮ್ಮ ಹೆಸರಿನಲ್ಲಿ ಸಂಘದಿಂದ ಹಣವನ್ನು ಸಾಲವಾಗಿ ಪಡೆದುಕೊಂಡು ನಮಗೆ ಮೋಸ ಮಾಡಿರುತ್ತಾರೆ. ಆದ್ದರಿಂದ ಅಲವೇಲಮ್ಮ ರವರ ವಿರುದ್ದ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬೇಕಾಗಿ ಕೋರಿ ನೀಡಿದ |

| | | |
|---|---|---|
| | | ದೂರಿನ ಮೇರೆಗೆ ಚಿಂತಾಮಣಿ ಗ್ರಾಮಾಂತರ ಪೊಲೀಸ್ ಠಾಣಾ ಮೊ.ಸಂ: 444/2022 ಕಲಂ: 419,420,465,471 ಐ.ಪಿ.ಸಿ ರೀತ್ಯಾ ಪ್ರಕರಣ ದಾಖಲಿಸಿಕೊಂಡಿರುತ್ತದೆ.<br><br>ಸದರಿ ಪ್ರಕರಣದಲ್ಲಿ ತನಿಖಾಧಿಕಾರಿಗಳು ತನಿಖೆ ಮುಂದುವರೆಸಿ, ಸ್ಥಳ ಪಂಚನಾಮೆಯನ್ನು ಕೈಗೊಂಡು, ಆರೋಪಿಯಾದ ಚಿಕ್ಕಕೊಂಡ್ರಹಳ್ಳಿ ಗ್ರಾಮದ ಅಂಗನವಾಡಿ ಕಾರ್ಯಕರ್ತೆ ಅಲವೇಲಮ್ಮ ಕೊಂ ಮಂಜುನಾಥ, 30 ವರ್ಷ, ಭೋವಿ ಜನಾಂಗ ರವರನ್ನು ದಿನಾಂಕ: 06-01-2023 ರಂದು ದಸ್ತಗಿರಿ ಮಾಡಿ, ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದ್ದು, ಈ ವಂಚನೆ ಕುರಿತಂತೆ ಅಗತ್ಯ ದಾಖಲಾತಿಗಳನ್ನು ನೀಡುವಂತೆ ಕೋರಿ ಹೆಚ್.ಡಿ.ಎಫ್.ಸಿ ಬ್ಯಾಂಕ್ ಮ್ಯಾನೇಜರ್‌ರವರಿಗೆ ಮನವಿಯನ್ನು ಸಲ್ಲಿಸಿಕೊಂಡಿರುತ್ತಾರೆ. ಶೀಘ್ರವಾಗಿ ದಾಖಲಾತಿಗಳನ್ನು ಪಡೆದುಕೊಂಡು ಅರೋಪಿಯ ಮೇಲಿನ ಅರೋಪದ ಬಗ್ಗೆ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಿ ಅರೋಪಿಯ ವಿರುದ್ಧ ಘನ ನ್ಯಾಯಾಲಯಕ್ಕೆ ಅಂತಿಮ ದೋಷಾರೋಪಣಾ ಪತ್ರವನ್ನು ಸಲ್ಲಿಸಿಕೊಳ್ಳಲಾಗುವುದು.<br><br>ಪ್ರಕರಣವನ್ನು ದಾಖಲಿಸುವ ವಿಚಾರದಲ್ಲಿ ಯಾವುದೇ ವಿಳಂಬ ಮಾಡಿರುವುದಿಲ್ಲ ಹಾಗೂ ಫಿರ್ಯಾದಿ ದೂರು ನೀಡಿದ ಕೂಡಲೇ ಪ್ರಕರಣ ದಾಖಲಿಸಿ ಫಿರ್ಯಾದಿಗೆ ಉಚಿತವಾಗಿ ಪ್ರಥಮ ವರ್ತಮಾನ ವರದಿಯನ್ನು ನೀಡಲಾಗಿರುತ್ತದೆ. |
| ಆ | ಬಂದಿದ್ದಲ್ಲಿ, ಎಫ್.ಐ.ಆರ್ ದಾಖಲು ಮಾಡಲು ನಿರ್ಲಕ್ಷ್ಯ ತೋರಿದವರ ವಿರುದ್ದ ಕ್ರಮ ಕೈಗೊಳ್ಳಲಾಗುವುದೇ; ಸಂಘದ ಸದಸ್ಯರ ಹೆಸರಿನಲ್ಲಿ ಅಕ್ರಮವಾಗಿ ಹಣ ಡ್ರಾ ಮಾಡಿಕೊಂಡವರ ವಿರುದ್ದ ಪ್ರಕರಣ ದಾಖಲಿಸಿ, ಸಂಬಂಧಿಸಿದ ಸದಸ್ಯರುಗಳಿಗೆ ಹಣವನ್ನು ಯಾವ ಕಾಲಮಿತಿಯೊಳಗೆ ಹಿಂದಿರುಗಿಸಲು ಕ್ರಮ ಕೈಗೊಳ್ಳಲಾಗುವುದು? | ಈ ವಂಚನೆ ಪ್ರಕರಣವನ್ನು ದಾಖಲಿಸುವ ವಿಚಾರದಲ್ಲಿ ಯಾವುದೇ ವಿಳಂಬ ಮಾಡಿರುವುದಿಲ್ಲ ಹಾಗೂ ಫಿರ್ಯಾದಿ ದೂರು ನೀಡಿದ ಕೂಡಲೇ ಪ್ರಕರಣ ದಾಖಲಿಸಿ ತನಿಖೆಯನ್ನು ಕೈಗೊಳ್ಳಲಾಗಿರುತ್ತದೆ. ತನಿಖೆ ಮುಂದುವರೆಸಿ ಸ್ಥಳ ಪಂಚನಾಮೆಯನ್ನು ಕೈಗೊಂಡು, ಆರೋಪಿಯಾದ ಚಿಕ್ಕಕೊಂಡ್ರಹಳ್ಳಿ ಗ್ರಾಮದ ಅಂಗನವಾಡಿ ಕಾರ್ಯಕರ್ತೆ ಅಲವೇಲಮ್ಮ ಕೋಂ ಮಂಜುನಾಥ, 30 ವರ್ಷ, ಭೋವಿ ಜನಾಂಗ ರವರನ್ನು ದಿನಾಂಕ: 06.01.2023 ರಂದು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿರುತ್ತದೆ. ಪ್ರಕರಣದಲ್ಲಿ ಶೀಘ್ರವಾಗಿ ದಾಖಲಾತಿಗಳನ್ನು ಪಡೆದುಕೊಂಡು ಹಾಗೂ ಆರೋಪಿಯ ಮೇಲಿನ ಆರೋಪದ ಬಗ್ಗೆ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಿ ಆರೋಪಿಯ ವಿರುದ್ದ ಘನ ನ್ಯಾಯಾಲಯಕ್ಕೆ ಅಂತಿಮ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗುವುದು. ನಂತರ ಸಂಘದ ಸದಸ್ಯರುಗಳಿಗೆ ಹಣವನ್ನು ಹಿಂತಿರುಗಿಸುವ ವಿಚಾರದಲ್ಲಿ ಘನ ನ್ಯಾಯಾಲಯದ ಆದೇಶದಂತೆ ಕ್ರಮವಹಿಸಲಾಗುವುದು. |

ಹೆಚ್‌ಡಿ 01 ಪಿಸಿಕ್ಯೂ 2023

(ಆರಗ ಜ್ಞಾನೇಂದ್ರ)
ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 533 |
| ಸದಸ್ಯರ ಹೆಸರು | : | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ (ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ | : | 16-02-2023 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ರೈತರು ಬೆಳೆಯುವ ಬೆಳೆಗಳಿಗೆ ನೀರೊದಗಿಸಲು ಸರ್ಕಾರ ಉಚಿತ ವಿದ್ಯುತ್ ನೀಡಿರುವ ರೀತ್ಯಾ ಕಾಫಿ ಬೆಳೆಯುವ ರೈತರುಗಳು ಉಪಯೋಗಿಸುವ 10 ಹೆಚ್.ಪಿ ಪಂಪ್‌ಸೆಟ್ ಗಳಿಗೆ ಉಚಿತ ವಿದ್ಯುತ್ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿನ ಕಾಫಿ ಬೆಳೆಗಾರರ ಮನವಿಯಂತೆ ರಾಜ್ಯ ಸರ್ಕಾರವು "ರಾಜ್ಯದಲ್ಲಿನ ಸಣ್ಣ ಮತ್ತು ಮಧ್ಯಮ ಕಾಫಿ ಬೆಳೆಗಾರರ 10 ಹೆಚ್.ಪಿ ವರೆಗಿನ ನೀರಾವರಿ ವಿದ್ಯುತ್ ಪಂಪ್‌ಸೆಟ್ ಸ್ಥಾವರಗಳ ವಿದ್ಯುತ್ ಶುಲ್ಕವನ್ನು DBT (Direct Benefit Transfer) ಯೋಜನೆಯ ವ್ಯವಸ್ಥೆಯಡಿ ಸರ್ಕಾರದಿಂದ ಮರುಪಾವತಿಸಲು ಸರ್ಕಾರಿ ಆದೇಶ ಸಂಖ್ಯೆ: ಎನರ್ಜಿ/521/ಪಿಎಸ್‌ಆರ್/2021 ದಿನಾಂಕ:20.07.2022ರಂದು ಹೊರಡಿಸಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಪ್ರಕ್ರಿಯೆ ಈಗಾಗಲೇ ಜಾರಿಯಲ್ಲಿರುತ್ತದೆ. |
| ಆ) | ಹಾಗಿದ್ದಲ್ಲಿ, ಸರ್ಕಾರ ಯಾವ ಕಾಲಮಿತಿಯಲ್ಲಿ ಈ ಕುರಿತು ಆದೇಶ ಹೊರಡಿಸುವುದು; | |
| ಇ) | ಇಲ್ಲದಿದ್ದಲ್ಲಿ, ಕಾಫಿ ಬೆಳೆಯುವ ರೈತರಿಗೆ ಉಚಿತ ವಿದ್ಯುತ್ ನೀಡಲು ಸರ್ಕಾರಕ್ಕಿರುವ ತೊಂದರೆಗಳೇನು; | |
| ಈ) | ಕಾಫಿ ಬೆಳೆಯುವ ರೈತರನ್ನೂ ಸಹ ವ್ಯವಸಾಯಗಾರರೆಂದು ಪರಿಗಣಿಸಿ ಈ ರೈತರುಗಳಿಗೆ ಉಚಿತ ವಿದ್ಯುತ್ ನೀಡಲು ಸರ್ಕಾರ ಕ್ರಮವಹಿಸುವುದೇ? | |

ಸಂಖ್ಯೆ :ಎನರ್ಜಿ 20 ಪಿಪಿಎಂ 2023

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 7
2. ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
3. ಉತ್ತರಿಸಬೇಕಾದ ದಿನಾಂಕ : 16.02.2023
4. ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಕಾಲ ಯೋಜನೆಯನ್ನು ಯಾವಾಗ ಜಾರಿಗೆ ತರಲಾಗಿದೆ; ಈ ಯೋಜನೆಯ ಮೂಲ ಉದ್ದೇಶಗಳೇನು; | ರಾಜ್ಯದಲ್ಲಿ ಸಕಾಲ ಯೋಜನೆಯನ್ನು ದಿನಾಂಕ:02.04.2012 ರಂದು ಜಾರಿಗೆ ತರಲಾಗಿದೆ. ರಾಜ್ಯದಲ್ಲಿನ ನಾಗರಿಕರಿಗೆ ನಿಗದಿತ ಕಾಲಮಿತಿಯೊಳಗೆ ಸೇವೆಗಳನ್ನು ಒದಗಿಸುವುದು ಈ ಯೋಜನೆಯ ಮೂಲ ಉದ್ದೇಶವಾಗಿದೆ. |
| ಆ) | ಈ ಯೋಜನೆಯು ಮೂಲ ಆಶಯಕ್ಕೆ ಸಮರ್ಪಕವಾಗಿ ಕಾರ್ಯನಿರ್ವಹಣೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆ ದಿಸೆಯಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011 ಮತ್ತು (ತಿದ್ದುಪಡಿ) ಅಧಿನಿಯಮ, 2014 ಈ ಅಧಿನಿಯಮವನ್ನು ಜಾರಿಗೆ ಬಂದು ಈಗಾಗಲೇ ಒಂದು ದಶಕ ಕಳೆದಿದ್ದು, ಪ್ರಸ್ತುತ 100 ಇಲಾಖೆ/ಸಂಸ್ಥೆಗಳ 1181 ಸೇವೆಗಳು ಸಕಾಲದಲ್ಲಿ ಅಧಿಸೂಚಿಸಲ್ಪಟ್ಟಿವೆ. 2012 ರಿಂದ ಇಲ್ಲಿಯವರೆವಿಗೆ ಒಟ್ಟು 29,63,48,794 ಅರ್ಜಿಗಳು ಸ್ವೀಕೃತವಾಗಿದ್ದು, ಇದರಲ್ಲಿ 29,04,46,663 ಅರ್ಜಿಗಳು ವಿಲೇವಾರಿಯಾಗಿರುತ್ತದೆ. ಅರ್ಜಿಗಳನ್ನು ವಿಲೇ ಮಾಡಿದ ಶೇಕಡಾ-ವಾರು ಪ್ರಮಾಣ 94.89 ಆಗಿರುತ್ತದೆ. |
| ಇ) | ಪ್ರಸ್ತುತ ಸಕಾಲ ಯೋಜನೆಯಡಿ ಸುದೀರ್ಘ ಅವಧಿಯಿಂದ ವಿಲೇವಾರಿಯಾಗದೇ ಬಾಕಿ ಇರುವ ಅರ್ಜಿಗಳ ಸಂಖ್ಯೆ ಎಷ್ಟು; ಅರ್ಜಿಗಳು ಎಷ್ಟು ದಿವಸಗಳಿಂದ ಬಾಕಿ ಇರುತ್ತವೆ; (ಇಲಾಖಾವಾರು ಹಾಗೂ ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ ಸಕಾಲ ಯೋಜನೆಯಡಿ ವಿಲೇವಾರಿಯಾಗದೇ ಬಾಕಿ ಇರುವ ಅರ್ಜಿಗಳಿಗೆ ಸಂಬಂಧಿಸಿದಂತೆ ಇಲಾಖಾವಾರು ಮತ್ತು ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ-1** ರಲ್ಲಿ ಇರಿಸಿದೆ. |
| ಈ) | ಸದರಿ ಅರ್ಜಿಗಳು ಇದುವರೆವಿಗೂ ವಿಲೇವಾರಿಯಾಗದೇ ವಿಳಂಬಗೊಳ್ಳುತ್ತಿರುವುದಕ್ಕೆ ಕಾರಣಗಳೇನು; | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕಂದಾಯ ಇಲಾಖೆ, ನಗರಾಭಿವೃದ್ಧಿ ಇಲಾಖೆ, ಉನ್ನತ ಶಿಕ್ಷಣ ಇಲಾಖೆ, ಸಾರಿಗೆ ಇಲಾಖೆ, ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಲಿ, ಕಾರ್ಮಿಕ ಇಲಾಖೆಗಳಲ್ಲಿ ಸೇವೆಗಳು ತಡವಾಗುತ್ತಿರುವುದಕ್ಕೆ ಇಲಾಖೆಗಳು ಕೆಳಕಂಡಂತೆ ಕಾರಣಗಳನ್ನು ನೀಡಿರುತ್ತವೆ:-<br>1. ಕೆಲವು ಆಡಳಿತಾತ್ಮಕ ಕಾರಣಗಳಿಗಾಗಿ ಅರ್ಜಿಗಳು ಬಾಕಿ ಉಳಿದಿರುತ್ತವೆ.<br>2. ಕೆಲವೊಮ್ಮೆ ಅಗತ್ಯ ದಾಖಲೆಗಳನ್ನು ಅರ್ಜಿ ಸಲ್ಲಿಸುವ ಸಮಯದಲ್ಲಿ ಒದಗಿಸದಿದ್ದಲ್ಲಿ ಅಂತಹ ಅರ್ಜಿದಾರರಿಗೆ ದಾಖಲೆಗಳನ್ನು ಸಲ್ಲಿಸುವಂತೆ ಕೋರಲಾಗುತ್ತದೆ. ಅರ್ಜಿದಾರರು ದಾಖಲೆಗಳನ್ನು ಸಲ್ಲಿಸಲು ವಿಳಂಬ ಮಾಡಿದಲ್ಲಿ ಅಂತಹ ಅರ್ಜಿಗಳು ಬಾಕಿ ಉಳಿಯುತ್ತವೆ.<br>3. ಕೆಲವು ತಾಂತ್ರಿಕ ಕಾರಣಗಳಿಂದಾಗಿ ಅರ್ಜಿಗಳು ಬಾಕಿ ಉಳಿದಿರುತ್ತವೆ. |

| | | |
|---|---|---|
| ಉ) | ಬಾಕಿ ಇರುವ ಪ್ರಕರಣಗಳನ್ನು ಯಾವ ಕಾಲ ಮಿತಿಯೊಳಗೆ ವಿಲೇವಾರಿ ಮಾಡಲಾಗುವುದು; | ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011 ಮತ್ತು (ತಿದ್ದುಪಡಿ) ಅಧಿನಿಯಮ, 2014 ರಡಿ ನಿಗದಿಪಡಿಸಿದ ಕಾಲಮಿತಿಯೊಳಗೆ ಬಾಕಿ ಇರುವ ಪ್ರಕರಣಗಳನ್ನು ವಿಲೇವಾರಿ ಮಾಡಲು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಗೆ ಸೂಚನೆಗಳನ್ನು ನೀಡಲಾಗುತ್ತಿದೆ. |
| ಊ) | ಅದಕ್ಕಾಗಿ ಸರ್ಕಾರವು ಕೈಗೊಳ್ಳುವ ವಿಶೇಷ ಕ್ರಮಗಳೇನು? (ವಿವರ ನೀಡುವುದು) | • ಸಾರ್ವಜನಿಕರು ನಿಗದಿತ ಅವಧಿಯೊಳಗೆ ಯಾವುದೇ ಸೇವೆ ಲಭ್ಯವಾಗದಿದ್ದಲ್ಲಿ, ಮೇಲ್ಮನವಿ ಸಲ್ಲಿಸುವ ಅವಕಾಶ ಕಲ್ಪಿಸುವ ಮೂಲಕ ನಾಗರಿಕ ಸಬಲೀಕರಣಗೊಳಿಸಲಾಗಿದೆ.<br>• ಕರ್ನಾಟಕ ನಾಗರೀಕ ಸಕಾಲ ಸೇವೆಗಳ ಅಧಿನಿಯಮ, 2011ರ ಕಲಂ (9)ರ ಅನುಸಾರ ನಿಗದಿತ ಸಮಯದಲ್ಲಿ ಸೇವೆಯನ್ನು ನೀಡಲು ವಿಫಲರಾದಂತಹ ಪ್ರತಿಯೊಬ್ಬ ಹೆಸರಿಸಲಾದ ಅಧಿಕಾರಿ ಅಥವಾ ಅಧೀನದಲ್ಲಿರುವ ಸಾರ್ವಜನಿಕ ನೌಕರರ ವೇತನದಿಂದ ಪ್ರತಿ ವಿಳಂಬಿತ ದಿನಕ್ಕೆ ರೂ.20 ರಂತೆ ಗರಿಷ್ಠ 500 ಗಳನ್ನು ಕಟಾವಣೆ ಮಾಡುವ ಅವಕಾಶವಿರುತ್ತದೆ.<br>• ಜಿಲ್ಲೆಯ ಜಿಲ್ಲಾಧಿಕಾರಿಗಳ ಹಂತದಲ್ಲಿ ಸಕಾಲ ಸಮನ್ವಯ ಸಮಿತಿಗಳ ಮುಖಾಂತರ ನಾಗರಿಕರಿಗೆ ಸಕಾಲದಲ್ಲಿ ಸೇವೆಗಳನ್ನು ವಿಲೇಗೊಳಿಸಲು ಅಗತ್ಯ ಕ್ರಮವಹಿಸಲಾಗುತ್ತಿದೆ.<br>• ಇಲಾಖಾ ಮುಖ್ಯಸ್ಥರ ಮಟ್ಟದಲ್ಲಿ ಸಭೆಗಳು, ಇ-ಮೇಲ್ ಹಾಗೂ ಅರೆ ಸರ್ಕಾರಿ ಪತ್ರಗಳ ಮೂಲಕ ಬಾಕಿ ಇರುವ ಪ್ರಕರಣಗಳನ್ನು ನಿಗದಿತ ಕಾಲಮಿತಿಯೊಳಗೆ ವಿಲೇವಾರಿ ಮಾಡಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ:ಸಿಆಸುಇ 12 ಎಸ್ಎಎಂಎಸ್ 2023

(ಬಿ.ಸಿ.ನಾಗೇಶ್)
ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು

ಅನುಬಂಧ - 1

## Department Wise Overdue as on 08-02-2023

| S No | Main Department | Overdue |
|---|---|---|
| 1 | LABOUR DEPARTMENT | 151673 |
| 2 | RURAL DEVELOPMENT AND PANCHAYAT RAJ | 46930 |
| 3 | REVENUE DEPARTMENT | 21398 |
| 4 | URBAN DEVELOPMENT DEPARTMENT | 16429 |
| 5 | TRANSPORT DEPARTMENT | 4805 |
| 6 | DEPARTMENT OF HIGHER EDUCATION | 4212 |
| 7 | URBAN DEVELOPMENT DEPARTMENT(Municipal Administration and Urban Development Authorities) | 2895 |
| 8 | FOOD, CIVIL SUPPLIES, CONSUMER AFFAIRS AND LEGAL METROLOGY DEPARTMENT | 2514 |
| 9 | ENERGY DEPARTMENT | 2079 |
| 10 | REVENUE DEPARTMENT(IGRS) | 1748 |
| 11 | SOCIAL WELFARE DEPARTMENT | 1737 |
| 12 | HOME DEPARTMENT | 1313 |
| 13 | HEALTH AND FAMILY WELFARE DEPARTMENT | 643 |
| 14 | FINANCE DEPARTMENT | 604 |
| 15 | FOREST, ECOLOGY AND ENVIRONMENT DEPARTMENT | 596 |
| 16 | MEDICAL EDUCATION DEPARTMENT | 579 |
| 17 | LAW DEPARTMENT | 403 |
| 18 | HOUSING DEPARTMENT | 338 |
| 19 | PRIMARY AND SECONDARY EDUCATION | 319 |
| 20 | CO-OPERATION DEPARTMENT | 297 |
| 21 | KANNADA AND CULTURE DEPARTMENT | 188 |
| 22 | COMMERCE AND INDUSTRIES DEPARTMENT | 157 |
| 23 | DEPARTMENT OF WOMEN AND CHILD DEVELOPMENT | 124 |
| 24 | ANIMAL HUSBANDRY AND FISHERIES DEPARTMENT | 105 |
| 25 | MINOR IRRIGATION AND GROUND WATER DEVELOPMENT DEPARTMENT | 82 |
| 26 | HORTICULTURE AND SERICULTURE DEPARTMENT | 55 |
| 27 | SKILL DEVELOPMENT ENTEREPRENEURSHIP AND LIVELIHOOD | 45 |
| 28 | AGRICULTURE DEPARTMENT | 40 |
| 29 | WATER RESOURCES DEPARTMENT | 29 |
| 30 | COMMERCE AND INDUSTRIES DEPARTMENT (Mines and MSME) | 23 |
| 31 | MINORITY WELFARE HAJ AND WAKF DEPARTMENT | 13 |
| 32 | PUBLIC WORKS DEPARTMENT | 13 |

| S No | Main Department | Overdue |
|---|---|---|
| 33 | INFRASTRUCTURE DEVELOPMENT PORTS AND INLAND WATER | 10 |
| 34 | DEPARTMENT OF INFORMATION AND PUBLIC RELATIONS | 9 |
| 35 | DEPARTMENT OF YOUTH EMPOWERMENT AND SPORTS | 8 |
| 36 | DEPARMENT OF PERSONNEL & ADMINISTRATIVE REFORMS | 1 |

## District Wise Overdue as on 08-02-2023

| S No | District | Overdue |
|---|---|---|
| 1 | Bengaluru Urban | 39449 |
| 2 | Haveri | 24188 |
| 3 | Belagavi | 18086 |
| 4 | Kalaburagi | 17698 |
| 5 | Dharwad | 12385 |
| 6 | Bagalkot | 10613 |
| 7 | Yadgir | 10534 |
| 8 | Hassan | 10270 |
| 9 | Davanagere | 9976 |
| 10 | Chitradurga | 9905 |
| 11 | Tumakuru | 8653 |
| 12 | Mysuru | 8339 |
| 13 | Kolar | 8180 |
| 14 | Vijayanagara | 7730 |
| 15 | Ballari | 7576 |
| 16 | Chikkamagaluru | 7398 |
| 17 | Raichur | 7182 |
| 18 | Mandya | 6801 |
| 19 | Vijayapura | 6693 |
| 20 | Gadag | 6303 |
| 21 | Ramanagara | 6011 |
| 22 | Shivamogga | 4381 |
| 23 | Dakshina Kannada | 3812 |
| 24 | Chikkaballapura | 3177 |
| 25 | Uttara Kannada | 1953 |
| 26 | Chamarajanagar | 1460 |
| 27 | Koppal | 1356 |

| S No | District | Overdue |
|---|---|---|
| 28 | Bidar | 861 |
| 29 | Bengaluru Rural | 776 |
| 30 | Kodagu | 289 |
| 31 | Udupi | 280 |